( ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ ೯ ನೆಯ ಪುಷ್ಪ. )

---

ಶ್ರೀ ಸ್ವಾಮಿ ರಾಮಕೃಷ್ಣ ಪರಮಹಂಸರ

# ಸತ್ಕಥಾ ಕುಸುಮ ಮಂಜರಿ.

( ದ್ವಿತೀಯ ಗುಚ್ಛ. )



ಇದನ್ನು

ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ ಸಂಪಾದಕರಾದ

**ನಾರಾಯಣ ವೆಂಕಟೇಶ ಕುರದಿ**

ಇವರು

ರಚಿಸಿದರು.

---

ಪ್ರಥಮಮುದ್ರಣ.

---

೧೯೨೪.

# ವಿಷಯಾನುಕ್ರಮಣಿಕೆ.





Printed by Mr. R. S. Hukkerikar at the Karmaveer Press, Dharwar and Published by Mr. Narayan Venkatesh Kurdi, at the Shri Saraswati Mandiram Dharwar.

# ೧. ಕಲ್ಪವೃಕ್ಷ.

ಮಾರ್ಗಾಯಾಸದಿಂದ ದಣಿದು ಕಣ್ಗೆಟ್ಟ ದಾರಿಕಾರನೊಬ್ಬನು ಬಿಸಿಲಿನ ತಾಪದಿಂದಲೂ ಹಸಿವೆ-ನೀರಡಿಕೆಗಳ ಬಳಲಿಕೆಯಿಂದಲೂ ಮುಂದ ಹೆಜ್ಜೆಯಿಡಲಾರದೆ ದಾರಿಯ ಮಗ್ಗುಲಲ್ಲಿರುವ ಒಂದು ಗಿಡದ ನೆರಳನ್ನು ಸೇರಿ ಮಲಗಿಕೊಂಡನು. ದೈವಯೋಗದಿಂದ ಅದೇ ಕಲ್ಪವೃಕ್ಷವಾಗಿದ್ದಿತು. ಬೇಡಿದುದನ್ನು ಕೊಡುವ ಕಲ್ಪವೃಕ್ಷದ ಕೆಳಗೆ ತಾನು ಮಲಗಿರುವೆನೆಂಬ ಅರಿವು ಆ ದಾರಿಕಾರನಿಗೆ ಎಷ್ಟುಮಾತ್ರವೂ ಇರಲಿಲ್ಲ. ತನ್ನನ್ನು ಆಶ್ರಯಿಸಿದವರ ಬಯಕೆಗಳನ್ನೆಲ್ಲ ಪರಕ್ಷಣದಲ್ಲಿಯೇ ಪೂರೈಸಿ ಕೊಡುವುದು ಕಲ್ಪವೃಕ್ಷದ ಗುಣವು. ದಾರಿಕಾರನು ಒಂದೆರಡು ಗಳಿಗೆ ವಿಶ್ರಮಿಸಿಕೊಂಡ ಬಳಿಕ ಮನಸ್ಸಿನಲ್ಲಿ "ಹಸಿವೆ-ನೀರಡಿಕೆಗಳಿಂದ ಬಳಲುವ ಈ ಹೊತ್ತಿನಲ್ಲಿ ನನಗೆ ಒಂದು ಊಟದ ಅನ್ನವೂ ಒಂದು ತಂಬಿಗೆ ನೀರೂ ದೊರೆದರೆ ಇನ್ನೇನು ಬೇಕು !" ಎಂದು ಆಲೋಚಿಸಿದನು. ಈ ಭಾವನೆಯು ಅವನ ಮನಸ್ಸಿನಲ್ಲಿ ಬಂದೊಡನೆ ಯಾವನೋ ಒಬ್ಬನು ಬಂದು ಒಂದು ಊಟದ ಸಾಮಗ್ರಿಯನ್ನೆಲ್ಲ ಎಲೆಯಲ್ಲಿ ಬಡಿಸಿ ತಂಬಿಗೆಯಲ್ಲಿ ನೀರು ತುಂಬಿ ಅವನ ಇದಿರಿಗೆ ಇಟ್ಟು ನಡೆದನು. ದಾರಿಕಾರನು ಅದನ್ನು ನೋಡಿ ಹಿರಿಹಿರಿ ಹಿಗ್ಗಿ ಬಡಿಸಿದ ಎಡೆಯನ್ನುಂಡು ನೀರು ಕುಡಿದು ಮತ್ತೊಂದು ಗಳಿಗೆ ವಿಶ್ರಾಂತಿಗೆಂದು ಅಲ್ಲಿಯೇ ಒರಗಿದನು. ತನಗೆ ಎಡೆಯನ್ನು ಯಾರು ತಂದುಕೊಟ್ಟರು ? ಎಲ್ಲಿಂದ ತಂದು ಕೊಟ್ಟರು ? ಮುಂತಾದ ವಿಚಾರವನ್ನೇನೂ ಮಾಡಲಿಲ್ಲ. ಆ ದಾರಿಕಾರನು ಮತ್ತೊಂದು ಗಳಿಗೆಯಾದ ಬಳಿಕ— "ನಾನು ಇಂಥ ನಿರ್ಜನವಾದ ಸ್ಥಳದಲ್ಲಿ ಒಬ್ಬನೇ ಕುಳಿತಿದ್ದೇನೆ, ಅಕಸ್ಮಾತ್ತಾಗಿ ಒಂದು ಹುಲಿ ಬಂದು ನನ್ನನ್ನೇ ತಿಂದುಬಿಟ್ಟರೆ......" ಅವನ ವಿಚಾರವು ಕೊನೆಮುಟ್ಟಲೇ ಇಲ್ಲ. ನೆಲನಡುಗುವ ಹಾಗೆ ಗುಡುಗುಡಿಸುವ ಹುಲಿಯು ಇದಿರಿಗೆ ಬಂದೇಬಿಟ್ಟಿತು! ದಾರಿಕಾರನು ಅರಿವಿಲ್ಲದೆ ಬಿದ್ದಿರಲು ಹುಲಿಯು ಅವನನ್ನು ತಿಂದು ಹೋಗಿಬಿಟ್ಟಿತು! ದೇವರ ವಿಚಾರವೂ ಹೀಗೆಯೇ ಸರಿ.

ಸಾ|| ಇಳೆಯನಾಳುವ ಶ್ರೀಹರಿಯ ಸಾಮರ್ಥ್ಯವ । ತಿಳಿದು ನಡೆವುದು ಮಾನವನೇ ||
ತಿಳಿಗೇಡಿ ಘನಕಲ್ಪವೃಕ್ಷದ ನೆರಳಿನಲಿ । ಕುಳಿತು ತಾಂ ಸುಖವ ಪಡೆಯುವನೇ ||

## ೨. ಇಬ್ಬರು ಅಣ್ಣ ತಮ್ಮಂದಿರು.

ಒಬ್ಬ ಬ್ರಾಹ್ಮಣನಿಗೆ ಇಬ್ಬರು ಮಕ್ಕಳಿದ್ದರು. ತಂದೆ ತೀರಿದ ಬಳಿಕ ಸಂಸಾರದಲ್ಲಿ ಕೂಡಿ ನಡೆಯದಂತಾಗಲು ಅಣ್ಣನು ಸನ್ಯಾಸಿಯಾಗಿ ಪರದೇಶಕ್ಕೆ ಹೊರಟು ನಡೆದನು. ಅವನು ಹನ್ನೆರಡು ವರುಷಗಳವರೆಗೆ ತಪಸ್ಸು ಮಾಡಿ ಅಣಿಮಾದ್ಯಷ್ಟ ಸಿದ್ಧಿಗಳನ್ನು ಪಡೆದು ನಾನಾ ತೀರ್ಥ ಕ್ಷೇತ್ರಗಳಲ್ಲಿ ಸಂಚಾರ ಮಾಡುತ್ತ ಬಹುದಿನಗಳು ಕಳೆದ ಬಳಿಕ ಹಿಮ್ಮೆ ತನ್ನ ಊರಿಗೆ ತಿರುಗಿ ಬಂದನು. ಊರು ಬಿಟ್ಟು ಹೋದ ಅಣ್ಣನು ಬಹುದಿನಗಳ ತರುವಾಯ ತಿರುಗಿ ಬಂದುದದನ್ನು ನೋಡಿ ತಮ್ಮನಿಗೆ ತುಂಬಾ ಸಂತೋಷವಾಯಿತು.

ಅಣ್ಣತಮ್ಮಂದಿರು ಬಹಳ ಹೊತ್ತಿನವರೆಗೆ ಮಾತಾಡುತ್ತ ಕುಳಿತರು. ಅಣ್ಣನು ತಾನು ಸಂಚರಿಸಿದ ಹಲವು ತೀರ್ಥ ಕ್ಷೇತ್ರಗಳ ಸಂಗತಿಗಳನ್ನೆಲ್ಲ ಬಣ್ಣಿಸಿ ಹೇಳಿದನು. ತಮ್ಮನು ಆ ಮಾತುಗಳಿಂದ ತುಂಬಾ ಸಂತೋಷಪಟ್ಟನು. ಅವನ ಮನಸ್ಸಿನಲ್ಲೊಂದು ಸಂಶಯವುಂಟಾಯಿತು. ಅವನು:— "ಅಣ್ಣಾ ನೀನು ಹನ್ನೆರಡು ವರುಷಗಳವರೆಗೆ ಸರ್ವಸಂಗಪರಿತ್ಯಾಗ ಮಾಡಿ ತಪಸ್ಸು ಮಾಡಿ ಏನು ಗಳಿಸಿಕೊಂಡ ಹಾಗಾಯಿತು ?" ಎಂದನು.

ಆಗ ಅಣ್ಣನು ಅವನನ್ನು ಕರೆದುಕೊಂಡು ನದಿಯ ದಂಡೆಗೆ ನಡೆದನು. ಮತ್ತು ತಾನು ತುಂಬಿ ಹರಿಯುತ್ತಿರುವ ನದಿಯ ನೀರಿನಲ್ಲಿ ನೆಲದ ಮೇಲೆ ನಡೆಯುವಂತೆ ನಡೆದು ಆಚೆಯ ದಂಡೆಯನ್ನು ಮುಟ್ಟಿದನು ! ನದಿಗೆ ಬಂದ ಅನೇಕರು ಇದನ್ನು ನೋಡಿ ಆಶ್ಚರ್ಯಚಕಿತರಾದರು. ನಾವಾಡಿಗರು ದಾರಿಕಾರರನ್ನು ಒಂದೊಂದು ದುಡ್ಡು ತಕ್ಕೊಂಡು ಒಂದು ದಂಡೆಯಿಂದ ಮತ್ತೊಂದು ದಂಡೆಗೆ ಒಯ್ದು ಮುಟ್ಟಿಸುತ್ತಿದ್ದರು. ಅಣ್ಣನು ನೀರ ಮೇಲೆ ನಡೆದು ಆಚೆಯ ದಂಡೆಗೆ ಮುಟ್ಟುವಷ್ಟರಲ್ಲಿಯೇ ತಮ್ಮನು ಅಂಬಿಗನಿಗೆ ಒಂದು ದುಡ್ಡು ಕೊಟ್ಟು ತಾನೂ ನಿರಾಯಾಸವಾಗಿ ಅವನಿರುವ ದಂಡೆಗೆ ಬಂದು ಮುಟ್ಟಿದನು. ಮತ್ತು "ಅಣ್ಣಾ, ಏನಿದು ? ನೀನು ಹನ್ನೆರಡು ವರ್ಷ ಕಷ್ಟಪಟ್ಟು ಗಳಿಸಿದ್ದರ ಬೆಲೆ ಮೂರೇ ಕಾಸಲ್ಲವೇ ? " ಎಂದನು. ಅಣ್ಣನು ಮುಖತಗ್ಗಿಸಿ ಸುಮ್ಮನೆ ನಿಂತುಕೊಂಡನು. ಅವನೇನು ಹೇಳಬೇಕು ?

ಸಾಂ || ಶಕ್ತಿಸಾಧನೆಗಾಗಿ ಜಪತಪವೆಸಗುವ | ವ್ಯಕ್ತಿ ತಾನೇನ ಸಾಧಿಪನು ||
ಭಕ್ತಿ ಭಾವನೆಯಿಂದ ಪರಮಾತ್ಮನೊಳಗಾ | ಸಕ್ತನಾದವನೆ ಸಾಧಕನು ||

## ೩. ಸನ್ಯಾಸಿಯೂ ಭಗವಂತನೂ.

ಒಂದು ಊರಲ್ಲಿ ಪರಮ ಧಾರ್ಮಿಕನಾದ ಒಬ್ಬ ಸನ್ಯಾಸಿಯಿದ್ದನು. ಅವನು ಬಹುದಿನಗಳ ಪರಿಶ್ರಮದಿಂದ ಅಣಿಮಾದ್ಯಷ್ಟ ಸಿದ್ಧಿಗಳನ್ನು ಪಡೆದಿದ್ದನು. ಅವನು ಇನ್ನನೇಕ ವಿಷಯಗಳಲ್ಲಿ ಸಾಧುವೇ ಆಗಿದ್ದರೂ ತನ್ನ ಅಸಾಮಾನ್ಯವಾದ ಸಾಮರ್ಥ್ಯ ಸಾಧನೆಗಾಗಿ ತುಂಬಾ ಅಹಂಕಾರ ಪಡುತ್ತಿದ್ದನು. ಭಗವಂತನು ಆತನ ಅಹಂಕಾರವನ್ನು ಕಳೆದು ಬುದ್ಧಿಗಲಿಸಬೇಕೆಂದು ಒಮ್ಮೆ ಬ್ರಾಹ್ಮಣನ ವೇಷದಿಂದ ಅವನ ಬಳಿಗೆ ಬಂದನು.

ಬ್ರಾಹ್ಮಣನು ಬಂದುದನ್ನು ನೋಡಿ ಸಾಧುವು ತಕ್ಕ ಉಪಚಾರಗಳಿಂದ ಅವನನ್ನು ಮನ್ನಿಸಿ ಕುಳ್ಳಿರಿಸಿದನು. ಅಷ್ಟರಲ್ಲಿ ದೊಡ್ಡದೊಂದು ಆನೆಯು ಭಾರವಾದ ಶರೀರವನ್ನು ಹೊರಲಾರದೆ ತೂಗುತ್ತ ನಡೆದಿರುವಂತೆ ಅವರ ಇದಿರಿಗೆ ಬಂದಿತು. ಆಗ ಬ್ರಾಹ್ಮಣನು-“ಸ್ವಾಮೀ, ತಾವು ಯೋಗಸಾಧನೆಯಿಂದ ಅನೇಕ ಅಸಾಧ್ಯಕಾರ್ಯಗಳನ್ನು ಜರುಗಿಸಬಲ್ಲಿರೆಂದು ಕೇಳಿರುವೆನು. ಈ ಆನೆಯು ಇಲ್ಲಿಯೇ ಸತ್ತು ಬೀಳುವಂತೆ ಮಾಡಬಲ್ಲಿರಾ?” ಎಂದನು.

ಸಾಧುವು :-ಓಹೋ! ಇದರಲ್ಲೇನಿದೆ? ನೋಡಿರಿ ಎಂದವನೇ ಒಂದು ಹಿಡಿ ಮಣ್ಣನ್ನು ತಕ್ಕೊಂಡು ಏನೋನೋ ಉಚ್ಚರಿಸಿ ಆ ಆನೆಯ ಕಡೆಗೆ ತೂರಿದನು. ಪ್ರತಕ್ಷಣದಲ್ಲಿಯೇ ಆನೆಯು ಸುಟ್ಟು ಬೂದಿಯಾಗಿ ಬಿದ್ದಿತು. ಆಗ ಬ್ರಾಹ್ಮಣನು ಸಖೇದಾಶ್ಚರ್ಯದಿಂದ-“ಸ್ವಾಮೀ, ತಮ್ಮ ಶಕ್ತಿ ಅಗಾಧವಾದುದೇ ಸರಿ. ಅಜ್ಞನನ್ನು ಕ್ಷಮಿಸಿರಿ ನಿಷ್ಕಾರಣವಾಗಿ ಆನೆಯನ್ನು ಕೊಂದ ದೋಷಕ್ಕೆ ನಾನು ಗುರಿಯಾಗಬೇಕಾಯಿತು! ದಯವಿಟ್ಟು ಇದನ್ನು ಬದುಕಿಸುವಿರಾ?” ಎಂದನು. ಆಗ ಸಾಧುವು-“ಇಕೊಳ್ಳಿರಿ” ಎಂದು ಮತ್ತೊಂದು ಹಿಡಿ ಮಣ್ಣನ್ನು ಮತ್ತೇನೇನೋ ಉಚ್ಚರಿಸಿ ಆ ಕಡೆಗೆ ತೂರಿದೊಡನೆಯೇ ಆನೆಯು ಮೊದಲಿನಂತೆ ಎದ್ದು ನಿಂತು ತನ್ನ ಹಾದಿಯಿಂದ ನಡೆಯಿತು. ಬಳಿಕ ಬ್ರಾಹ್ಮಣನು “ಸ್ವಾಮೀ ಈ ತರದ ಅಲೌಕಿಕ ಶಕ್ತಿಸಾಧನೆಯಿಂದ ಏನು ಪ್ರಯೋಜನವಿದೆ? ಈ ಶಕ್ತಿಯ ಸಹಾಯದಿಂದ ಭಗವಂತನನ್ನು ಕಂಡುಕೊಳ್ಳುವಿರೇನು?” ಎಂದನು. ಸಾಧುವಿನ ಉತ್ಸಾಹವೆಲ್ಲ ಕುಗ್ಗಿ ಹೋಯಿತು. ಅವನು ಪುನಃ ಮಾತಾಡಲಿಲ್ಲ.

ಸಾರ || ಶಕ್ತಿ ಸಾಧನೆಯಿಂದ ಪರಮಾತ್ಮನನೆ ಮರೆತ | ವ್ಯಕ್ತಿಯೇ ಮೂಢನ್ನೆ ಜಗದೆ ||
ಶಕ್ತಿ ಸಂಚಯದಹಂಕಾರವೆಳ್ಳಷ್ಟಿರಲು | ಭಕ್ತವತ್ಸಲ ಮರೆಯಹನು ||

## ೪ ತಂಬಾಕಿನ ವ್ಯಸನಿ.

ಒಂದು ಊರಲ್ಲಿ ಒಬ್ಬ ಮುದುಕ ಒಕ್ಕಲಿಗನಿದ್ದನು. ಅವನಿಗೆ ಚಿಕ್ಕಂದಿನಿಂದಲೂ ತಂಬಾಕು ಸೇದುವ ವ್ಯಸನವು ವೃದ್ಧಿಯುಂಡು ಹೋಗಿತ್ತು. ಯಾವ ಕೆಲಸದಲ್ಲಿದ್ದರೂ ಯಾವ ವಿಚಾರದಲ್ಲಿದ್ದರೂ ಗಳಿಗೆಗೊಮ್ಮೆ ಚಿಲಿಮೆಯನ್ನು ಹೊತ್ತಿಸದಿದ್ದರೆ ಅವನ ಕೆಲಸವೇ ಸಾಗದು; ವಿಚಾರವೇ ನಡೆಯದು. ಇಂತಿರುವಾಗ ಒಂದು ದಿನ ಮಧ್ಯರಾತ್ರಿಯ ಸಮಯದಲ್ಲಿ ನಿದ್ದೆಯಿಂದ ಎಚ್ಚತ್ತು ತಂಬಾಕು ಸೇದಬೇಕೆಂದು ಕುಳಿತನು. ತಂಬಾಕಿನ ಹುಡಿಯನ್ನು ಸರಿಮಾಡಿ ಚಿಲಿಮೆಯನ್ನು ತುಂಬಿ ಒಳಗೆ ಒಲೆಯ ಬಳಿಗೆ ಹೋಗಿ ನೋಡಲು ಅಲ್ಲಿ ಕೆಂಡವಿರಲಿಲ್ಲ. ವೃದ್ಧನು ಚಡಪಡಿಸಿ ತಂಬಾಕಿನ ಚಿಲಿಮೆಯನ್ನು ಹಿಡಿದುಕೊಂಡು ಮನೆಯೊಳಗೆಲ್ಲ ಅಡ್ಡಾಡಿದರೂ ಏನು ಮಾಡಬೇಕೆಂಬದು ಸೂಚಿಸಲಿಲ್ಲ. ಕೊನೆಗೆ ಅವನು ನೆರೆಮನೆಗೆ ಹೋಗಿ ಬಾಗಿಲು ಬಡಿದು ಒದರಾಡಿ ಮಲಗಿದವರನ್ನು ಎಬ್ಬಿಸಿದನು. ನಡುರಾತ್ರಿಯಲ್ಲಿ ಒದರಾಡಿ ಎಬ್ಬಿಸುವುದನ್ನು ನೋಡಿ ಅದೇನು ಅಂತಹ ಕೆಲಸವಿದೆಯೋ ಎಂದು ಅವರು ಗಾಬರಿಯಾಗಿ ಹೊರಗೆ ಬಂದು "ಇಷ್ಟೇಕೆ ಅವಸರ ? ಮುಂಜಾನೆ ಮಾತಾಡಿದರೆ ಬರುತ್ತಿದ್ದಿಲ್ಲವೇ" ಎಂದರು,

ವೃದ್ಧ—ತುಂಬಾ ಅವಸರದ ಮಾತೇ ಸರಿ. ತಂಬಾಕು ಸೇದದೆ ಇದ್ದರೆ ನನಗೆ ಬೆಳಗಾಗುವ ವರೆಗೂ ನಿದ್ರೆಯೇ ಬರುತ್ತಿರಲಿಲ್ಲ. ಎಲ್ಲಾ ಇದೆ. ಆದರೆ ಒಲೆಯಲ್ಲಿ ಬೆಂಕಿ ಇರಲಿಲ್ಲ. ಅದಕ್ಕಾಗಿ ನಿಮ್ಮನ್ನು ತೊಂದರೆಪಡಿಸಬೇಕಾಯಿತು.

ಮುದುಕನ ಮಾತು ಕೇಳಿ ಅವರೆಲ್ಲರೂ ನಕ್ಕರು. "ಏನಯ್ಯಾ, ನಿನ್ನ ಕೈಯಲ್ಲಿ ಉರಿಯುತ್ತಿರುವ ಕಂದೀಲಿನ ದೀಪವೇ ನಿನಗೆ ಕಾಣಿಸದೆ ಹೋಯಿತಲ್ಲವೇ ! ನಿನ್ನ ತಂಬಾಕಿನ ವ್ಯಸನಕ್ಕೆ ಅಳತೆಯುಳಿಯಲಿಲ್ಲ. ಎನ್ನುತ್ತ ಮನೆಯೊಳಗೆ ನಡೆದರು. ಮುದುಕನು ಮರಳಿ ಮಾತಾಡದೆ ಮನೆಗೆ ಬಂದು ತಂಬಾಕು ಸೇದಿ ಮಲಗಿಕೊಂಡನು.

ಸಾಂ|| ಹೂವಿನೊಳ್ ಫಲದಂತೆ ಬೀಜದೊಳ್ ಸಸಿಯಂತೆ ।  
ದೇವ ನಿಮ್ಮೊಳಗಡಗಿಹನು ।।  
ದೇವನಸ್ತಿತ್ವವ ಮರೆಮಾಳ್ಪ ಮಾಯೆಯಿ ।  
ಭಾವನೆಯೆ ಬಾಧಕವು ನಮಗೆ ||

## ೫. ಸನ್ಯಾಸಿಯೂ ಸಾವುಕಾರನೂ.

ಒಂದು ಊರಲ್ಲಿ ಒಂದು ಮಠವಿದ್ದಿತು. ಅದರಲ್ಲಿ ಅನೇಕ ಸನ್ಯಾಸಿಗಳು ದೇಶವಿದೇಶಗಳಿಂದ ಬಂದು ವಾಸವಾಗಿದ್ದರು. ಅವರೆಲ್ಲರೂ ದಿನಾಲು ತಮ್ಮ ನಿತ್ಯಕರ್ಮಗಳನ್ನು ತೀರಿಸಿಕೊಂಡು ಭಿಕ್ಷೆಗೆ ಹೊರಡುತ್ತಿದ್ದರು. ಒಂದು ದಿನ ಅವರೊಳಗಿನವನೊಬ್ಬನು ಭಿಕ್ಷೆಗೆಂದು ಹೊರಟಿರಲು ದಾರಿಯಲ್ಲಿ ಆ ಊರಿನ ಸಾವುಕಾರನೊಬ್ಬನು ತನ್ನ ಆಳುಮಗನನ್ನು ಅದೇನೋ ಅಪರಾಧಕ್ಕಾಗಿ ದಯೆಗೆಟ್ಟು ಹೊಡೆಯುತ್ತಿದ್ದನು. ಆಳುಮಗನು ಅತ್ತು ಗೋಳಾಡುವುದನ್ನು ನೋಡಿ ಸನ್ಯಾಸಿಯು ಮನಕರಗಿ "ಮಹಾರಾಯಾ ದಯಮಾಡಿ ಈತನನ್ನು ಹೊಡೆಯುವದನ್ನು ಬಿಡು. ಅವನು ನಿನ್ನ ಕೈಯೊಳಗಿನ ಆಳು, ನೀನು ಹೇಳಿದಂತೆ ನಡೆಯುವವನು. ಒಮ್ಮೊಮ್ಮೆ ಅಪ್ಪಿತಪ್ಪಿ ತಪ್ಪಾಗುವದುಂಟು. ಅವನೇನು ಬೇಕೆಂದು ನಿನ್ನಲ್ಲಿ ಅಪರಾಧ ಮಾಡಿರಲಿಕ್ಕಿಲ್ಲ. ಈಗ ನೀನು ಮಾತ್ರ ತಿಳಿದೂ ತಿಳಿದೂ ಭಗವಂತನಲ್ಲಿ ಅಪರಾಧ ಮಾಡತೊಡಗಿರುವೆ. ಇದಕ್ಕೆ ಭಗವಂತನು ನಿನಗೆ ....." ಎನ್ನುತ್ತಿದ್ದನು. ಸಾವುಕಾರನ ಸಿಟ್ಟು ತಲೆಗೇರಿತು. ನನ್ನ ಆಳುಮಗನನ್ನು —ಅದೂ ಅವನ ತಪ್ಪಿಗಾಗಿ—ನಾನು ಶಿಕ್ಷಿಸಿದರೆ ಈ ಬೀದಿಯ ತಿರುಕನಿಗೆ ಆದುದೇನು? ಎಂದವನೇ ಸನ್ಯಾಸಿಯ ಮೇಲೆ ಬಿದ್ದು ಅವನನ್ನು ಮೈಮುರಿ ಹೊಡೆದನು. ಸನ್ಯಾಸಿಯು ಹೊಡೆತವನ್ನು ತಾಳಲಾರದೆ ಎಚ್ಚರದಪ್ಪಿ ಬಿದ್ದುಬಿಟ್ಟನು. ಈ ಸುದ್ದಿಯು ಮಠದೊಳಗಿನ ಮಿಕ್ಕ ಸನ್ಯಾಸಿಗಳಿಗೆ ತಿಳಿಯಲು ಅವರು ಬಂದು ಅವನನ್ನು ಎತ್ತಿಕೊಂಡು ಮಠಕ್ಕೆ ಒಯ್ದು ಉಪಚರಿಸ ತೊಡಗಿದರು. ಅವರ ಉಪಚಾರದಿಂದ ಸನ್ಯಾಸಿಯು ಮೆಲ್ಲನೆ ಕಣ್ಣು ತೆರೆದನು. ಸನ್ಯಾಸಿಗೆ ಸರಿಯಾಗಿ ಅರಿವುಂಟಾಗಿರುವುದೋ ನೋಡಲೆಂದು ಅವರು "ಸ್ವಾಮೀ, ನಿಮ್ಮನ್ನು ಉಪಚರಿಸುವವರು ಯಾರೆಂದು ತಿಳಿಯುವದೋ?" ಎಂದು ಕೇಳಿದರು.

ಸನ್ಯಾಸಿಯು—"ಯಾವಾತನು ಆಗ ನನ್ನನ್ನು ಮೈಮುರಿ ಹೊಡೆದು ಎಚ್ಚರದಪ್ಪುವಂತೆ ಮಾಡಿದನೋ ಅವನೇ ಈಗ ಉಪಚರಿಸುತ್ತಿದ್ದಾನೆ. ಹೊಡೆದವನ ಮೇಲೆ ನನಗೆ ಕೋಪವೂ ಇಲ್ಲ; ನಿಮ್ಮಮೇಲೆ ಮಮತೆಯೂ ಇಲ್ಲ" ಎಂದನು. ನಿಜವಾದ ಸಾಧುಗಳಿಗೆ ಶತ್ರುಗಳೂ ಮಿತ್ರರೂ ಒಂದೇ ಸರಿ.

ಸಾಂ ॥ ಮತಿವಂತನಾದ ಸುಜ್ಞಾನಿಗೆ ಜನರೆಲ್ಲ । ಹಿತವಂತರೆಂದೆ ತೋರುವರು
ಹಿತದೊಳಾದರಿಸುವರಂತೆಯೆ ಶತ್ರುಗ । ಳತಿ ಹಿತವಂತರ್ಹೆ ಅವಗೆ ॥

## ೬.ನೇ ಮಗನ ಮರಣ.

ಒಂದು ಊರಲ್ಲಿ ಒಬ್ಬ ಹಣವಂತನಾದ ಒಕ್ಕಲಿಗನಿದ್ದನು. ಮನೆಯಲ್ಲಿ ಹದಿನಾರು ಎತ್ತಿನ ಕಮತವಿತ್ತು. ಹೆಂಡತಿ ಸುಂದರಿ; ಮಗನು ಸುಗುಣಿ.

ಇಂತು ಸುಖದಿಂದ ಬಾಳುವೆ ಮಾಡುತ್ತಿರಲು ಅದೇನೋ ಮಹಾವ್ಯಾಧಿಯಿಂದ ಅವನ ಒಬ್ಬನೇ ಮಗನು ಅಕಸ್ಮಾತ್ತಾಗಿ ಮರಣ ಹೊಂದಿದನು. ಮನೆತನದ ಮೇಲೆ ಆಕಾಶದ ಕೊಡಲಿಯೇ ಬಿದ್ದಂತಾಯಿತು. ಮನೆಯೊಳಗಿನ ಆಳುಮಕ್ಕಳೂ ಮಿಕ್ಕನೇಕ ಪ್ರೀತಿಯವರೂ ಬಂದು ಗೋಳಿಟ್ಟು ಅಳತೊಡಗಿದರು. ಯಜಮಾನಿತಿಯಂತೂ ಎದೆಎದೆ ಬಡಕೊಂಡು ಬಿದ್ದುಬಿದ್ದು ಅತ್ತಳು. ಯಜಮಾನನು ಮಾತ್ರ, ಕಣ್ಣಿನಲ್ಲಿ ಒಂದು ಹನಿ ನೀರು ತರಲಿಲ್ಲ; ಒಟ್ಟೊಂದು ಮಾತಾಡಲಿಲ್ಲ. ಮುಂದಿನ ವ್ಯವಸ್ಥೆಯನ್ನು ಮಾಡುವುದರಲ್ಲಿ ನಿರ್ವಿಕಾರಚಿತ್ತದಿಂದ ತೊಡಗಿದ್ದನು; ಮಗನ ಶವವನ್ನು ಎತ್ತಲಿಕ್ಕೆ, ತಾನೇ ಮುಂದೆ ಬಂದನು. ಯಜಮಾನಿತಿಗೆ ಇನ್ನು ಕೋಪವನ್ನು ತಡೆಯುವುದಾಗಲಿಲ್ಲ. ಗಂಡನು ನಿಷ್ಕರುಣಿಯೆಂದು ಕಂಡು ಅವಳು ಕಡುಕೋಪಗೊಂಡಳು. ಅವಳು ಗಂಡನನ್ನು— "ನಿನ್ನಂಥ ಕಲ್ಲೆದೆಯವನ ಮನೆಯಲ್ಲಿ ನನ್ನ ಮುದ್ದು ಮಗು ಹುಟ್ಟಿದ್ದೇ ಅನ್ಯಾಯವು. ನಿನ್ನೊಡನೆ ಬಾಳಲಾರೆನೆಂದೇ ಅವನು ಹೊರಟು ನಡೆವನು. ಸರಿ—ಮುಟ್ಟಬೇಡ ನನ್ನ ಮಗುವನ್ನು—" ಎಂದು ಗದ್ದರಿಸಿದಳು.

ಯಜಮಾನನು ತುಸು ದೂರ ಸರಿದು ನೆರೆದವರನ್ನು ನೋಡಿ—" ನಿನ್ನೆ ರಾತ್ರಿ ನನಗೊಂದು ಕನಸು ಬಿದ್ದಿತ್ತು. ಆಗ ನಾನು ಈ ದೇಶಕ್ಕೇ ಅರಸನಾಗಿದ್ದೆನು. ಮಂತ್ರಿಪರಿವಾರದವರು ಜೀಯಾ! ಎಂದು ಕೈಕಟ್ಟಿಕೊಂಡು ಓಲೈಸುತ್ತಿದ್ದರು. ಅನೇಕರಾಜ ಕುವರಿಯರು ಅಂತಃಪುರದಲ್ಲಿ ನಾನು ದರಬಾರಿನಿಂದ ಬರುವುದನ್ನು ಇದಿರು ನೋಡುತ್ತಿದ್ದರು. ಹತ್ತೆಂಟು ಮುದ್ದುಮಕ್ಕಳು ರಾಜಸಭೆಯಲ್ಲಿಯೂ ನನ್ನನ್ನು ಹಿಂಬಾಲಿಸಿ ಬಂದು ತಮ್ಮ ಮುದ್ದುಮಾತುಗಳಿಂದ ಸಂತೋಷಪಡಿಸುತ್ತಿದ್ದರು. ನಿದ್ದೆಯು ಎಚ್ಚರಾಗಲು ಎಲ್ಲವೂ ಮಾಯವಾದುವು! ನಿನ್ನಿನ ಆ ರಾಜವೈಭವಗಳಿಗೂ ಹತ್ತೆಂಟು ರಾಜಕುಮಾರರಿಗೂ ಹೆಚ್ಚು ಅಳಬೇಕೋ! ಈ ಒಬ್ಬನೇ ಮಗನಿಗಾಗಿ ಹೆಚ್ಚು ಅಳಬೇಕೋ? " ಎಂದನು.

ಸಾ ॥ ಕನಸಿನಂತಿರುವುದೀ ಸಂಸಾರಸೌಖ್ಯವು । ಜ್ಞಾನಿಗಳದಕೆ ಮೋಹಿಸದೆ ॥

ಧನಕನಕ ಸತಿಸುತರ ಸೌಖ್ಯವ ಮರೆಯಿಸುವ । ಘನಮುಕ್ತಿ ಸುಖವ ಬಯಸುವರು ॥

## ೭. ಅಕಬರಷಹನೂ ಫಕೀರನೂ.

ಘನವಂತನೆನಿಸಿಕೊಂಡ ಅಕಬರಷಹನು ದಿಲ್ಲಿಯಲ್ಲಿ ರಾಜ್ಯವಾಳುತ್ತಿದ್ದಾಗ ಸಮೀಪದ ಅಡವಿಯಲ್ಲಿ ಒಬ್ಬ ಫಕೀರನು ವಾಸವಾಗಿದ್ದನು. ಆತನು ವಿದ್ಯಾವಂತನಾಗಿದ್ದು ಶಿಷ್ಯರನ್ನು ಬೋಧಿಸಿ ಸನ್ಮಾರ್ಗಕ್ಕೆ ಹಚ್ಚುವುದರಲ್ಲಿ ತುಂಬಾ ಪ್ರವೀಣನೆಂದು ಹೆಸರಾಗಿದ್ದನು. ಆದುದರಿಂದ ದೂರ ದೂರ ದೇಶಗಳಿಂದ ಅವನ ಬಳಿಗೆ ಶಿಷ್ಯರು ಬರುತ್ತಿದ್ದರು. ಬಡವನಾದ ಫಕೀರನು ಅವರೆಲ್ಲರನ್ನು ತನ್ನ ಗುಡಿಸಲಿನಲ್ಲಿಟ್ಟುಕೊಂಡು ಅವರ ಹೊಟ್ಟೆಬಟ್ಟೆಗಳನ್ನು ನೋಡಿಕೊಳ್ಳುವದಾಗದೆ ಮನಸ್ಸಿನಲ್ಲಿ ತುಂಬಾ ವ್ಯಸನಪಡುತ್ತಿದ್ದನು. ಅಕಬರಷಹನು ವಿದ್ಯಾಭಿಮಾನಿಯೂ ಪ್ರಜೆಗಳ ವಿದ್ಯಾಭಿವೃದ್ಧಿಗಾಗಿ ಮನಮೆಚ್ಚಿ ಯತ್ನಿಸುತ್ತಿರುವವನೂ ಆಗಿರುವದರಿಂದ ಆತನ ಬಳಿಗೆ ಹೋಗಿ ಕೇಳಿಕೊಂಡರೆ ಸಾಕಷ್ಟು ದ್ರವ್ಯಸಹಾಯ ಮಾಡಬಹುದೆಂದು ಅವನ ಮನಸ್ಸಿಗೆ ಹೊಳೆಯಿತು. ಕೂಡಲೆ ಫಕೀರನು ಅಕಬರನ ಅರಮನೆಗೆ ನಡೆದನು. ಫಕೀರನು ಬಂದಾಗ ಅರಸನು ಪ್ರಾರ್ಥನೆ (ನಮಾಜ) ಯಲ್ಲಿ ತೊಡಗಿದ್ದನು. ಬಾದಷಹನ ಪ್ರಾರ್ಥನೆಯು ಮುಗಿಯಿತು. ಪ್ರಾರ್ಥನೆಯ ಕೊನೆಗೆ ಆತನು, ಭಗವಂತನನ್ನು—“ ತನಗೆ ಆಯುರಾರೋಗ್ಯಗಳನ್ನೂ ಸಿರಿಸಂಪತ್ತುಗಳನ್ನೂ ಇನ್ನಷ್ಟು ರಾಜ್ಯಭೋಗವನ್ನೂ ಕೊಡೆಂದು” ಬಹುದೈನ್ಯದಿಂದ ಬೇಡಿಕೊಂಡನು. ಈ ಮಾತುಗಳನ್ನು ಕೇಳಿದೊಡನೆಯೇ ಹಿಂದೆ ಕುಳಿತ ಫಕೀರನು ಹಿಂದಿನಿಂದಲೇ ದಾರಿ ಹಿಡಿದು ನಡೆದನು. ಅರಸನು ಇದನ್ನೆಲ್ಲ ನೋಡಿ ಫಕೀರನನ್ನು ತಿರುಗಿ ಕರೆಯಿಸಿ ಹೀಗೇಕೆ ಮಾಡಿದೆಯೆಂದು ಕೇಳಲು, ಆತನು ತಾನು ಬಂದ ಉದ್ದೇಶವನ್ನು ಹೇಳಿದನು. ಮತ್ತು ತಿರಿದುಂಬುವ ನಿನ್ನ ಒಳಿಯಲ್ಲಿ ನಾನೇಕೆ ತಿರುಕನಾಗಲಿ? ನಾನು ನಿನ್ನನ್ನು ಬೇಡ ಬಂದಿದ್ದಾಗ, ನೀನು ಇನ್ನೊಬ್ಬನಲ್ಲಿ ದೈನ್ಯದಿಂದ ಭಿಕ್ಷೆ ಬೇಡುವದನ್ನು ಕಣ್ಣಾರೆ ಕಂಡು ನಿನ್ನಿಂದ ಭಿಕ್ಷೆಯನ್ನು ಹೇಗೆ ಗ್ರಹಿಸಲಿ? ನೀನು ಯಾವಾತನಲ್ಲಿ ಬೇಡಿಕೊಂಡು ಇಷ್ಟೆಲ್ಲ ವೈಭವವನ್ನು ಪಡೆದಿರುವೆಯೋ ನಾನೂ ಆತನನ್ನೇ ಬೇಡಿಕೊಳ್ಳುವೆನು. ಎಂದು ನುಡಿದು ಎದ್ದು ನಡೆದನು.

ಸಾಂ|| ತಿರುಕ ಸಿರಿವಂತರ ಬಾಗಿಲೊಳಗೆ ನಿಂದು । ತಿರುಕನೆನ್ನಿಸಲೇಕೆ ಬಂದೆ ||
ಅರಸರಿಗೂ ತಿರಿಕೆಯ ನೀಡುವ ದೇವನೊಳ್ । ಸೆರಗೊಡ್ಡಿ ಬೇಡು ಮಾನವನೇ ||

## ೮. ಬಾಲಕನೂ ಭಗವಂತನೂ.

ಒಂದು ಊರಲ್ಲಿ ಒಬ್ಬ ವಿಧವೆಯಿದ್ದಳು. ಅವಳಿಗೆ ಏಳು ವರುಷದ ಒಂದು ಚಿಕ್ಕ ಮಗುವಿನ ಹೊರತು ಸಂಸಾರದಲ್ಲಿ ಇನ್ನಾರೂ ಇರಲಿಲ್ಲ. ಆ ಹಳ್ಳಿಯು ಚಿಕ್ಕದಾದುದರಿಂದ ಅಲ್ಲಿ ಪಾಠಶಾಲೆಯಿರಲಿಲ್ಲ. ನೆರೆಯೂರಿನ ಶಾಲೆಗೆ ಹೋಗುವುದಾದರೆ ಚಿಕ್ಕದೊಂದು ಗುಡ್ಡವನ್ನೇರಿ ಕಾಡುದಾರಿಯಿಂದ ಹೋಗಬೇಕಾಗುತ್ತಿತ್ತು. ಮಗನಿಗೆ ವಿದ್ಯಾಭ್ಯಾಸ ಮಾಡಿಸುವದು ಅವಶ್ಯವೆಂದು ತೋರಿದುದರಿಂದ ಅವಳು ಒಂದೆರಡು ದಿನ ತಾನೇ ಮಗನನ್ನು ಕರೆದೊಯ್ದು ಶಾಲೆಗೆ ಮುಟ್ಟಿಸಿ ಬಂದಳು. ಮತ್ತು—“ಮಗೂ, ನಾನಿನ್ನು ದಿನಾಲು ನಿನ್ನ ಸಂಗಡ ಶಾಲೆಗೆ ಬರಲಾರೆನು. ದಾರಿಯಲ್ಲಿ ನಿನಗೆ ಭಯವೇನಾದರೂ ತೋರಿದರೆ ಅನಾಥನಾಥನಾದ ಭಗವಂತನನ್ನು ಕರೆದು ಮೊರೆಯಿಡು. ಆ ನಿನ್ನ ಬಂಧುವು ಬಂದು ನಿನ್ನನ್ನು ರಕ್ಷಿಸುವನು” ಎಂದು ಉಪದೇಶ ಮಾಡಿದಳು “ಅಮ್ಮಾ, ಅನಾಥನಾಥನಾದ ಆ ನನ್ನ ಬಂಧುವು ಎಲ್ಲಿದ್ದಾನೆ? ನಾನು ಕರೆದರೆ ಅವನು ಬರಬಹುದೆ” ಎಂದನು. “ಅಹುದು ಮಗು, ಆತನು ಈ ಜಗತ್ತಿನ ತುಂಬಾ ವಾಸವಾಗಿದ್ದಾನೆ. ನೀನು ಪ್ರೀತಿಯಿಟ್ಟು, ಆತನು ಬಂದೇಬರುವನೆಂದು ನಂಬಿ ಕರೆಯಬೇಕು. ಕೂಡಲೆ ಆತನು ಇದಿರಿಗೆ ಬಂದು ನಿಲ್ಲುವನು.” ಎಂದು ತಾಯಿಯು ಪುನಃ ಉಪದೇಶಮಾಡಿದಳು. ಸರಳಮನಸ್ಸಿನ ಬಾಲಕನು ನಂಬಿಕೊಂಡನು.

ಒಂದು ದಿನ ಸಾಯಂಕಾಲದಲ್ಲಿ ಅದೇನೋ ಕಾರಣದಿಂದ ಶಾಲೆಯನ್ನು ಬಿಡಲಿಕ್ಕೆ ತಡವಾದುದರಿಂದ ಊರು ಬಿಡುವುದರೊಳಗೆಯೇ ಕತ್ತಲೆಯಾಯಿತು. ಬಾಲಕನು ಅಂಜಿ ಕಂಗೆಟ್ಟನು. ಅಷ್ಟರಲ್ಲಿ ಅವನಿಗೆ ತಾಯಿಯ ಮಾತಿನ ನೆನಪಾಗಲು “ಹೇ ಅನಾಥನಾಥ! ಪ್ರೀತಿಯ ಬಂಧು! ನೀನೆಲ್ಲಿರುವೆ?” ಎಂದು ಗೋಳಿಟ್ಟು ಅತ್ತನು. ಸರಳಹೃದಯದ ಬಾಲಕನ ವಿಶ್ವಾಸಪೂರ್ಣವಾದ ಕೂಗು ಭಗವಂತನಿಗೆ ಕೇಳಿಸದಿರಲಿಲ್ಲ. ಕೂಡಲೆ ಹತ್ತು ವರ್ಷದ ಒಬ್ಬ ಹುಡುಗನು ಇದಿರಿಗೆ ಬಂದು “ತಮ್ಮಾ ನಡೆ” ಎಂದು ನುಡಿದು ಮುಂದಾಗಿ ನಡೆದು ಮನೆತನಕ ಬಂದು ಮುಟ್ಟಿಸಿ ಹೋದನು. ಬಾಲಕನು ಆನಂದದಿಂದ ನಗುತ್ತ ಮನೆಯೊಳಗೆ ಹೋಗಿ ಅಮ್ಮನ ಇದಿರಿಗೆ ನಡೆದ ಸಂಗತಿಯನ್ನೆಲ್ಲ ಅರುಹಿದನು.

ಸಾಂ|| ಅಣುರೇಣು ತೃಣಕಾಷ್ಠ ಪರಿಪೂರ್ಣನಾಗಿಯೆ । ಗುಣರೂಪರಹಿತನೀಶ್ವರನು ||
ಮನದ ನಿಶ್ಚಯದಿಂದ ಮರೆಪೊಕ್ಕು ಕರೆದರೆ । ಗುಣರೂಪಗೊಂಡು ತಾ ಬಹನು ||

# ೯. ದೃಢಪ್ರತಿಜ್ಞೆ.

ಒಮ್ಮೆ ದೇಶದಲ್ಲೆಲ್ಲ ನೀರಿನ ಬರವುಂಟಾಗಿತ್ತು. ಮಳೆಯಿಲ್ಲದೆ ಬೆಳೆಗಳೆಲ್ಲ ಒಣಗತೊಡಗಿದ್ದುವು. ಕೆರೆ ಕಾಲುವೆಗಳಲ್ಲಿ ನೀರು ಬತ್ತಿ ಹೋಗಿತ್ತು. ಒಕ್ಕಲಿಗರು ಹೊಲದ ಪೈರು ಒಣಗುತ್ತಿರುವುದನ್ನು ನೋಡಿ ಬಹು ದುಃಖಿತರಾದರು. ಅವರ ಮೋರೆಯೂ ಒಣಗತೊಡಗಿತು.

ಇಂತಿರುವಾಗ ಒಂದು ದಿನ ಮುಂಜಾನೆ ಒಬ್ಬ ಒಕ್ಕಲಿಗನು ಹೆಗಲ ಮೇಲೆ ಗುದ್ದಲಿ ಸಲಿಕೆಗಳನ್ನಿಟ್ಟುಕೊಂಡು ಹೊಲಕ್ಕೆ ಹೊರಟನು. ಗಂಡನು ನ್ಯಾರಿಯನ್ನು ತೆಗೆದುಕೊಳ್ಳದೆ ಹೊಲಕ್ಕೆ ಹೊರಟುದನ್ನು ನೋಡಿ ಅವನ ಹೆಂಡತಿಯು ತುಸು ಬೇಸರದಿಂದ ತಲೆಬಾಗಿಲಿಗೆ ಹೋಗಿ ಅವನನ್ನು ಕರೆಯಲು ಯೋಚಿಸುತ್ತಿರುವಷ್ಟರಲ್ಲಿ "ಕೆಲಸಕ್ಕೆ ಹೊರಟವರನ್ನು ತಿರುಗಿ ಕರೆಯಲಾಗದೆಂದು" ಭಾವಿಸಿ ತಿರುಗಿ ಬಂದು ತನ್ನ ಕೆಲಸದಲ್ಲಿ ತೊಡಗಿದಳು.

ಮಧ್ಯಾಹ್ನವಾದೊಡನೆಯೇ ನೆರೆಹೊರೆಯ ಒಕ್ಕಲಿಗರೆಲ್ಲರೂ ಕೆಲಸ ಬಿಟ್ಟು ಮನೆಗೆ ಬಂದರು. ದಿನಾಲು ಐದು ತಾಸು ಹೊತ್ತೇರುವುದರೊಳಗೆ ಮನೆಗೆ ಬರುವ ಗಂಡನು ಇಂದು ಏಳು ತಾಸಾದರೂ ತಿರುಗಿ ಬಾರದಿರುವುದನ್ನು ನೋಡಿ ಒಕ್ಕಲಗಿತ್ತಿಯು ತಾನೇ ಹೊಲಕ್ಕೆ ಹೋದಳು. ಅಲ್ಲಿ ಅವಳ ಗಂಡನು ನದಿಯಿಂದ ಚಿಕ್ಕದೊಂದು ಕಾಲುವೆಯನ್ನು ಅಗೆದು ಹೊಲಕ್ಕೆ ನೀರು ತರಬೇಕೆಂದು ಪ್ರಯತ್ನ ಮಾಡುತ್ತಿದ್ದನು. ಈಗಾಗಲೇ ೧೦-೧೫ ಮಾರು ಕಾಲುವೆಯನ್ನು ಅಗೆದಿದ್ದನು. ಹೊಲವು ಇನ್ನೂ ಹದಿನೈದು ಮಾರು ದೂರವಿತ್ತು. ಹೆಂಡತಿಯು ಬಂದು ಬಳಿಯಲ್ಲಿಯೇ ನಿಂತರೂ ಆ ಕಡೆಗೆ ಒಕ್ಕಲಿಗನ ಲಕ್ಷ್ಯವೇ ಇರಲಿಲ್ಲ. ಅವನು ಒಮ್ಮೆ ನದಿಯ ಕಡೆಗೂ ಮತ್ತೊಮ್ಮೆ ಬಿಸಲಿನ ತಾಪದಲ್ಲಿ ಒಣಗುತ್ತ ನಿಂತಿರುವ ತನ್ನ ಹೊಲದ ಕಡೆಗೂ ನೋಡಿ,—"ಸರಿ, ಅರ್ಧ ಕೆಲಸವಾಯಿತು. ಇಂದು ಸೂರ್ಯಾಸ್ತವಾಗಲಿ, ಮೂರು ತಾಸು ರಾತ್ರಿಯಾಗಲಿ, ಹೊಲಕ್ಕೆ ನೀರು ಹಾಯಿಸದೆ ಬಾಯೊಳಗೆ ನೀರನ್ನು ಕೂಡ ಎರೆಯಲಾರೆನು. ಅಷ್ಟೊಂದು ಕಷ್ಟಬಟ್ಟು ಉತ್ತು ಬಿತ್ತಿ ಬೆಳೆಯಿಸಿದ ಬೆಳಸೆಲ್ಲಾ ಒಣಗುತ್ತಿರುವಾಗ ನನ್ನ ಹಸಿವೆ ನೀರಡಿಕೆಗಳ ಪಾಡೇನು?" ಎಂದು ತನ್ನೊಳಗೇ ಮಾತಾಡಿದನು.

ಗಂಡನ ಮಾತುಗಳನ್ನು ಕೇಳಿ ಒಕ್ಕಲಿಗಿತ್ತಿಯು ತುಂಬಾ ನೊಂದುಕೊಂಡಳು. ಮಧ್ಯಾಹ್ನದ ಬಿಸಿಲಿನ ಉರಿಯಿಂದ ಬಾಡಿ ಬಳಕಿರುವ ಬೆಳಸಿನಂತೆಯೇ ಅವಳ ಗಂಡನ ಮುಖವೂ ಕೆಂಪೇರಿ ಕುಂದಿ ಹೋಗಿತ್ತು. ಮೈಯಿಂದ ಸುರಿಯುತ್ತಿರುವ ಬೆವರಿನಿಂದ ಉಟ್ಟ ಬಟ್ಟೆಯೆಲ್ಲಾ ತೊಯಿದಿತ್ತು. ಆದರೂ ಅವನು ತುಂಬಾ ಉತ್ಸಾಹದಿಂದ ಕಾಲುವೆಯನ್ನು ಅಗೆದಗೆದು ಸಲಿಕೆಯಿಂದ ಮಣ್ಣನ್ನು ದೂರ ಎಸೆಯುತ್ತಿದ್ದನು. ಗಂಡನ ಆಡಿದ ಮಾತನ್ನು ಎಂದೂ ಬದಲಿಸದ ಸ್ವಭಾವವನ್ನು ಅವಳು ಚೆನ್ನಾಗಿ ಅರಿತಿದ್ದಳಾದರೂ ಆತನ ಮೇಲಿನ ಮಮತೆಯಿಂದ, ಅವನು ಹಸಿವೆ ನೀರಡಿಕೆಗಳಿಂದ ಬಳಲುವುದನ್ನು ನೋಡಿ ಕಳವಳಿಸಿ, ಮೆಲ್ಲನೆ ಹತ್ತಿರ ಹೋಗಿ—' ಈಗಾಗಲೇ ಹೊತ್ತು ತಿರುಗಿ ಹೋಗಿದೆ. ಏಳು ತಾಸು ಮೀರಿ ಹೋಯಿತು. ಮನೆಯಲ್ಲಿ ಅಡಿಗೆಯೆಲ್ಲಾ ಆರಿ ಹೋಗಿದೆ. ಮುಂಜಾನೆ ನ್ಯಾರಿಯನ್ನು ಕೂಡ ತೆಗೆದುಕೊಳ್ಳದೆ ಬಂದಿರುವುದರಿಂದ ಬೇಗನೆ ತಿರುಗಿ ಬರಬಹು ದೆಂದು ಗಡಬಡಿಯಿಂದ ಅಡಿಗೆ ಮಾಡಿಕೊಂಡು ದಾರೀ ನೋಡಿ ನೋಡಿ ಬೇಸರಿಮ ಕೊನೆಗೆ ಇಲ್ಲಿಗೇ ಬಂದೆನು " ಎಂದು ಮೆಲ್ಲಗೆ ನುಡಿದಳು.

ಒಕ್ಕಲಿಗಃ— ( ಬೆಳಸಿನ ಕಡೆಗೆ ಕೈನೀಡಿ ) ನೀರಿಲ್ಲದೆ ಒಣಗುತ್ತಿರುವ ಆ ಹೊಲವನ್ನು ನೋಡು. ಅದು ಬೆಳೆದರೆ ನಮ್ಮ ಬಾಳುವೆ! ಇಂದು ಒಂದು ದಿನ ಹಸಿವೆಯನ್ನು ತಾಳಿಕೊಳ್ಳಲಾರದ ನಾವು ಮುಂದೆ ಇಡೀ ವರುಷವೂ ಹಸಿವೆಯನ್ನು ಹೇಗೆ ಹಿಂಗಿಸಿಕೊಳ್ಳಲಾದೀತು ? ಇಂದು ಸಾಯಂಕಾಲದ ಒಳಗಾಗಿ ಹೊಲಕ್ಕೆ ನೀರು ಹಾಯಿಸದೆ ಇದ್ದರೆ ಈ ವರುಷದ ಬೆಳೆಯ ಆಶೆಯೇ ಇಲ್ಲ. ಆದುದರಿಂದ ಸಾಯಂಕಾಲವಾಗಲಿ, ರಾತ್ರಿಯೇ ಆಗಲಿ, ಇಂದೇ ಬೆಳೆಗೆ ನೀರುಣಿಸದೆ ಬಾಯೊಳಗೆ ನೀರನ್ನೂ ಎರೆಯೆನೆಂದು ಪ್ರತಿಜ್ಞೆ ಮಾಡಿದ್ದೇನೆ.

ಒಕ್ಕಲಿಗಿತಿಯು ಗಂಡನ ನುಡಿದಂತೆ ನಡೆಯುವ ಸ್ಥಿರಬುದ್ಧಿಯನ್ನು ಅರಿತವಳಾದುದರಿಂದ ಹೆಚ್ಚಿಗೆ ಮಾತಾಡದೆ ಮನೆಗೆ ನಡೆದಳು.

ಸಂಧ್ಯಾಕಾಲವು ಸಮೀಪಿಸಿರಲು ಒಕ್ಕಲಿಗನು ಹೆಗಲ ಮೇಲೆ ಗುದ್ದಲಿ ಸಲಕೆಗಳನ್ನಿಟ್ಟುಕೊಂಡು ಮನೆಗೆ ಬಂದು, "ತಂಬಾಕಿನ ಚಿಲಿಮೆಯನ್ನು ತಾ" ಎಂದು ತಲೆಬಾಗಿಲಿನಿಂದಲೇ ಹೆಂಡತಿಯನ್ನು ಕರೆದನು. ಒಕ್ಕಲಿಗಿತಿಯು ಕೊಳ್ಳಿಯನ್ನೂ ತಂಬಾಕು ತುಂಬಿದ ಚಿಲಿಮೆಯನ್ನೂ ತಂದು ಗಂಡನ ಮುಂದಿರಿಸಿ ಮುಖಾವರಣವನ್ನು ಸರಿಮಾಡಿಕೊಂಡು ಮುಗುಳು ನಗೆಯಿಂದ-- "ಇಷ್ಟು

ಬೇಗನೆ ಹೊಲಕ್ಕೆ ನೀರುಣಿಸುವುದಾಯಿತೆಂದು ತೋರುತ್ತದೆ" ಎಂದಳು. "ಆಡಿದಂತೆ ಮಾಡುವೆನೆಂದು ಹಟ ಹಿಡಿದರೆ ಯಾವುದು ತಾನೇ ಅಸಾಧ್ಯ ?" ಎನ್ನುತ್ತ ಒಕ್ಕಲಿಗನು ಮೋರೆಯ ಬೆವರನ್ನು ಒರಸಿಕೊಂಡು ನಕ್ಕನು. ಬಳಿಕ ಮೈತೊಳೆದು ಊಟ ಮಾಡುವಷ್ಟರಲ್ಲಿ ಸೂರ್ಯಾಸ್ತವಾಯಿತು.

ಅಂದು ಒಕ್ಕಲಿಗನಿಗೆ, ಅಡಿಗೆಯು ಆರಿ ಹೋಗಿದ್ದರೂ ಊಟವು ತುಂಬಾ ಸವಿಯಾಗಿ ತೋರಿತು. ರಾತ್ರಿ ನಿದ್ದೆಯೂ ಗಡದ್ದಾಗಿ ಹತ್ತಿತು. ನೆರೆಯ ಒಕ್ಕಲಿಗರೆಲ್ಲರೂ 'ಹೊಲಕ್ಕೆ ಇಂದು ಕಾಲುವೆ ಮಾಡಬೇಕು, ನಾಳೆ ಮಾಡಬೇಕು' ಎಂದು ಆಲೋಚನೆ ಮಾಡುತ್ತಿರುವಾಗಲೇ ಅವರ ಹೊಲವೆಲ್ಲ ಒಣಗಿ ಹೋಯಿತು. ಒಂದೇ ದಿನದಲ್ಲಿ ಕಾಲುವೆ ಮಾಡಿ ನೀರುಣಿಸಿದ ದೃಢ ಪ್ರತಿಜ್ಞೆಯ ಒಕ್ಕಲಿಗನ ಹೊಲವು ಮಾತ್ರ ಚೆನ್ನಾಗಿ ಬೆಳೆಯಿತು; ನೆರೆಹೊರೆಯವರು ಮಳೆಯಾಗದೆ ಬೆಳೆ ಹೋಯಿತೆಂದೂ ಲೋಕದಲ್ಲಿ ಪಾಪಿಷ್ಠರು ಹೆಚ್ಚುತ್ತ ನಡೆದಿರುವುದರಿಂದಲೇ ಬರಗಾಲವೂ ಹೆಚ್ಚುತ್ತ ನಡೆದಿರುವುದೆಂದೂ ತತ್ವಬೋಧೆ ಮಾಡುತ್ತ ಬಳಲುತ್ತಿರುವಾಗ, ಆತನು ಸುಖವಾಗಿದ್ದನು!

ಲೋಕದಲ್ಲಿ ಈ ಒಕ್ಕಲಿಗನಂತೆ ದೃಢ ಪ್ರತಿಜ್ಞೆಯುಳ್ಳ ಸ್ಥಿರಬುದ್ಧಿಯುವರೇ ಈಶ್ವರ ಸಾಕ್ಷಾತ್ಕಾರವನ್ನು ಹೊಂದಿ ಬ್ರಹ್ಮಾನಂದವನ್ನು ಪಡೆಯುವರು. ಪ್ರಪಂಚ ಸುಖಾಭಿಲಾಷಿಗಳಾದ ಸಾಮಾನ್ಯರು ಕೇವಲ ತತ್ವಜ್ಞಾನದ ಬಡಬಡಿಕೆಯಲ್ಲಿಯೇ ಆಯುಷ್ಯವನ್ನೆಲ್ಲ ಕಳೆದು ಬಿಟ್ಟು ಸಂಸಾರ ಸಾಗರದಲ್ಲಿ ಮುಳುಗಿ ಕಷ್ಟಪಡುತ್ತಿರುವರು.

ಸಾಂ ॥ ಮನಸಿನ ದೃಢಭಾವದಿಂದ ಕೈಕೊಂಡಿರ್ಪ ।
ಘನಕಾರ್ಯದಲಿ ಕಷ್ಟಪೊದಗೆ ॥
ಮನದ ಸಂಕಲ್ಪವನು ಬದಲಿಸದ ಸುಜ್ಞಾನಿ ।
ಘನ ಸೌಖ್ಯವನ್ನೆ ಹೊಂದುವನು ॥

## ೧೦. ಜಾಲಗಾರನ ಕಳ್ಳತನ.

ಒಂದಿದು ಊರಲ್ಲಿ ಒಬ್ಬ ಜಾಲಗಾರನಿದ್ದನು. ಅವನು ದಿನಾಲು ನೆರೆಯೂರಲ್ಲಿರುವ ಒಬ್ಬ ಸಾವುಕಾರನ ತೋಟಕ್ಕೆ ಹೋಗಿ ಅಲ್ಲಿರುವ ಕೆರೆಯಿಂದ ಮೀನವನ್ನು ತುಡುಗು ಮಾಡಿಕೊಂಡು ಬರುತ್ತಿದ್ದನು. ಸಾವುಕಾರನು ಈ ಸಂಗತಿಯನ್ನು ತಿಳಿದು ಒಂದು ದಿನ ರಾತ್ರಿಯೆಲ್ಲಾ ಕಾಯುತ್ತಲಿದ್ದು ತುಡುಗನನ್ನು ಹಿಡಿಯಬೇಕೆಂದು ತನ್ನ ಆಳುಗಳಿಗೆ ಆಜ್ಞಾಪಿಸಿದನು. ಆ ದಿನ ಅವರು ಒಡೆಯನ ಅಪ್ಪಣೆಯ ಮೇರೆಗೆ ತೋಟದೊಳಗಿನ ತಮ್ಮ ಗುಡಿಸಲಿನಲ್ಲಿ ಎಚ್ಚತ್ತು ಕುಳಿತಿದ್ದರು.

ಜಾಲಗಾರನು ದಿನದಂತೆ ತೋಟದ ಗೋಡೆಯನ್ನೇರಿ ಒಳಗೆ ಬಂದು ಕೆರೆಯಲ್ಲಿ ಬಲೆಯನ್ನು ಬೀಸಿದನು. ಆ ದನಿಯನ್ನು ಕೇಳಿದ ಕೂಡಲೆ ಎಚ್ಚತ್ತಿದ್ದ ಆಳುಗಳು ದೀಪವನ್ನು ತಕ್ಕೊಂಡು ಕೆರೆಯ ಕಡೆಗೆ ಓಡಿಬಂದರು. ತನ್ನನ್ನು ಹಿಡಿಯುವದಕ್ಕೆ ಬರುವುದು ತಿಳಿದ ಕೂಡಲೆ ಜಾಲಗಾರನು ಜಾಲದ ದಾರವನ್ನು ಕೆರೆಯಲ್ಲಿ ಎಸೆದು ಬಿಟ್ಟು ಬಳಿಯಲ್ಲಿಯೇ ಇರುವ ಒಂದು ಗಿಡದ ನೆಳಲಿನಲ್ಲಿ ಹೋಗಿ ಅಡಗಿ ಕುಳಿತನು. ದೈವಯೋಗದಿಂದ ಅಲ್ಲಿ ತೋಟಿಗರು ಒಣಗಿದ ಎಲೆಗಳನ್ನು ಗುಂಪು ಗೂಡಿಸಿ ಉರಿಹಚ್ಚಿದ ಬೂದಿಯ ಗುಂಪಿಯಿದ್ದಿತು. ಆ ಬೂದಿಯನ್ನು ನೋಡಿದೊಡನೆ ಜಾಲಗಾರನಿಗೆ ಹೊಸದೊಂದು ಯುಕ್ತಿ ತೋರಿತು. ಅವನು ಬೂದಿಯನ್ನು ಮೈಗೆಲ್ಲ ಬೊಳಿದು ( ತೊಡೆದು ) ಕೊಂಡು ದೇವರಧ್ಯಾನದಲ್ಲಿ ಆಸಕ್ತನಾದವನಂತೆ ನಟಿಸುತ್ತ ಕುಳಿತನು.

ತೋಟದ ಕಾವಲುಗಾರರು ಸುತ್ತಲೂ ಹುಡುಕಿ ಯಾರೂ ಕಾಣದಿರಲು ಕಳ್ಳನು ಓಡಿಹೋಗಿರಬಹುದೆಂದು ತಿಳಿದು ಯಜಮಾನನು ಕೇಳಿದರೆ ಏನುಹೇಳಬೇಕೆಂದು ತಮ್ಮ ತಮ್ಮೊಳಗೆ ಮಾತಾಡುತ್ತ ತಿರುಗಿ ಗುಡಿಸಲಕ್ಕೆ ಬರುವಾಗ ಗಿಡದ ನೆರಳಿನಲ್ಲಿ ಕುಳಿತ ಸನ್ಯಾಸಿಯನ್ನು ನೋಡಿದರು! ಯಜಮಾನನಿಗೆ ಈ ಸುದ್ದಿಯನ್ನು ಹೇಳಿದರೆ ತಮ್ಮ ತಪ್ಪು ಮರೆಯಾಗಬಹುದೆಂದು ಆಲೋಚಿಸಿ ಅವರು ಓಡುತ್ತಹೋಗಿ ಯಜಮಾನನಿಗೆ ತಮ್ಮ ತೋಟಕ್ಕೆ ಒಬ್ಬ ಸನ್ಯಾಸಿಯು ಬಂದಿರುವನೆಂದೂ ತಾವು ರಾತ್ರಿಯೆಲ್ಲಾ ಕೆರೆಯನ್ನು ಕಾಯುತ್ತ ತೋಟದಲ್ಲಿ ಸಂಚರಿಸುತ್ತಲೇ ಇರುವೆವೆಂದೂ ಹೇಳಿದರು.

ಈ ಸಂಗತಿಯನ್ನು ಕೇಳಿ ಸಾವುಕಾರನು ಆ ಸನ್ಯಾಸಿಯನ್ನು ತನ್ನ ಮನೆಗೆ ಕರೆಯಿಸಿ ಸನ್ಮಾನ ಮಾಡಿದನು. ಹೊತ್ತು ನೋಡಿ ಕಾವಲುಗಾರರ ಕಣ್ಣು ತಪ್ಪಿಸಿ ಓಡಿ ಹೋಗಿ ಬಿಡಬೇಕೆಂಬ ಬಲೆಗಾರನ ಹಂಚಿಕೆಯು ಹಂಚಾಗಿ ಹೋಯಿತು. ಅವನು ಮುಂದೇನು ಮಾಡಲೆಂದು ಮನಸ್ಸಿನಲ್ಲಿ ಚಿಂತಿಸುತ್ತಿದ್ದನು. ಅಷ್ಟರಲ್ಲಿ ಬೆಳಗಾಯಿತು. ಸನ್ಯಾಸಿಯು ಯಾರು ಏನು ಕೇಳಿದರೂ ಮಾತನ್ನೇ ಆಡಲಿಲ್ಲ.

ಸ್ವಲ್ಪ ಹೊತ್ತಿನಲ್ಲಿಯೇ ಸಾವುಕಾರನ ಮನೆಗೆ ಒಬ್ಬ ಮಹಾ ಜ್ಞಾನಿಯೂ ಮೌನಿಯೂ ಆದ ಸಾಧು ಪುರುಷನು ಬಂದಿರುವನೆಂಬ ಸುದ್ದಿ ಊರಲೆಲ್ಲ ಹಬ್ಬಿತು. ಜನರು ತಂಡ ತಂಡವಾಗಿ ಬಂದು ಹಣ್ಣು ಕಾಯಿಗಳನ್ನು ತಂದು ಸಾಧುವಿನ ಮುಂದಿಟ್ಟು ಸಾಷ್ಟಾಂಗವೆರಗಿ ಅವನ ಪಾದಧೂಳಿಯನ್ನು ಶಿರದಲ್ಲಿರಿಸಿಕೊಂಡು ಧನ್ಯರಾದೆವೆಂದು ಭಾವಿಸತೊಡಗಿದರು.

ಇತ್ತ ಜಾಲಗಾರನ ಮನಸ್ಸಿನ ಭಾವನೆಯು ಬದಲಾಯಿತು. ಅವನು ಮನಸ್ಸಿನಲ್ಲಿ "ವಿಮಾನದ ಕಳುವಿಗೆ ಬಂದು ತಪ್ಪಿಸಿಕೊಂಡು ಓಡಿ ಹೋಗಲು ಕಸವನ್ನು ಸುಟ್ಟ ಬೂದಿಯನ್ನು ಬೊಳೆದುಕೊಂಡು ಕುಳಿತು ದೇವರ ಧ್ಯಾನದಲ್ಲಿ ಆಸಕ್ತನಾದವನಂತೆ ನಟಿಸಿದ ಮಾತ್ರದಿಂದಲೇ ನನಗೆ ಇಷ್ಟೊಂದು ಸನ್ಮಾನವು ದೊರೆಯಿತು. ನಿಜವಾಗಿಯೂ ಸರ್ವಸಂಗ ಪರಿತ್ಯಾಗ ಮಾಡಿ ಭಗವಂತನ ಧ್ಯಾನದಲ್ಲಿಯೇ ಕಾಲಕಳೆದರೆ ನಾನು ಧನ್ಯನಾಗುವದರಲ್ಲಿ ಸಂದೇಹವಿಲ್ಲ" ಎಂದು ಭಾವಿಸಿದನು. ಮುತ್ತು ಅಂದಿನಿಂದ ಅವನು ನಿಜವಾದ ಸಾಧುವೇ ಆಗಿ ಭಗವಂತನ ಧ್ಯಾನದಲ್ಲಿಯೇ ಆಯುಷ್ಯವನ್ನೆಲ್ಲ ಕಳೆದನು ! ಪ್ರಸಂಗಾನುಸಾರವಾಗಿ ಒದಗುವ ಆಕಸ್ಮಿಕ ಘಟನೆಗಳಿಂದಲೂ ಮನುಷ್ಯನ ಮನಸ್ಸು ಸನ್ಮಾರ್ಗದ ಕಡೆಗೆ ಹೊರಳುವುದುಂಟು. ಆಗ ಆ ಸದ್ಭಾವನೆಯನ್ನೇ ಸ್ಥಿರವಾಗಿಟ್ಟುಕೊಂಡರೆ ತಾನಾಗಿಯೇ ಜ್ಞಾನೋದಯವಾಗುವುದು. ಬೆಳಕನ್ನು ಕಂಡ ಮೇಲೆಯೂ ಕತ್ತಲೆಯನ್ನು ಬಯಸುವದು ಮಾತ್ರ ಅನ್ಯಾಯವು!

ಸಾ॥ ಕಳುವಿಗೆಂದೈದಿರ್ದ ಕಳ್ಳ ಬಲೆಗಾರನು ।
ಕಳುವಿನಾರೋಪದಲ್ಲಿರಲು ॥
ಇಳೆಯ ಪಾಲಕನಲ್ಲಿ ಸರ್ವಸ್ವ ನರ್ಪಿಸುತ ।
ಗಳಿಸಿಕೊಂಡನು ನಿತ್ಯ ಸುಖವ ॥

## ೧೧ ನೇಕಾರನ ಹರಿಭಕ್ತಿ.

ಒಂದು ಹಳ್ಳಿಯಲ್ಲಿ ಒಬ್ಬ ಬಡವನಾದ ಜಾಡನಿದ್ದನು. ಅವನು ಜಾತಿಯಿಂದ ಜಾಡನಾಗಿದ್ದರೂ ದೇವರಲ್ಲಿ ಪರಮವಿಶ್ವಾಸವುಳ್ಳ ಶ್ರೀವಿಷ್ಣು ಭಕ್ತನಾಗಿದ್ದನು. ಹಳ್ಳಿಯ ಜನರೆಲ್ಲರೂ ಅವನನ್ನು ಪ್ರೀತಿಸುವರು. ಅವರಿಗೆ ಆತನಲ್ಲಿ ವಿಶ್ವಾಸ ಬಹಳ. ಅವನು ನೆಯ್ದಿರುವ ಅರಿವೆಗಳನ್ನು ಮಾರುವದಕ್ಕೆ ಪೇಟೆಗೆ ಒಯ್ದಿರಲು ಯಾರಾದರೂ ಇದರ ಬೆಲೆಯೇನೆಂದು ಕೇಳಿದರೆ ದೇವರಾಣೆಯಾಗಿಯೂ ಇದರಲ್ಲಿ ಒಂದು ರೂಪಾಯಿಯ ನೂಲಿದೆ, ಐದುವರೆ ಆಣೆಯ ಕೂಲಿಯಿದೆ, ಎರಡೂವರೆ ಆಣೆಯ ಲಾಭವನ್ನು ಸೇರಿಸಿ ಒಂದುವರೆ ರೂಪಾಯಿಗೆ ಮಾರಬೇಕೆಂದು ನಿಶ್ಚಯಿಸಿರುವೆನು. ದೇವರಾಣೆಯಾಗಿಯೂ ಈ ಮಾತಿನಲ್ಲಿ ಎಳ್ಳಷ್ಟು ಸುಳ್ಳಿಲ್ಲ, ಎಂದು ಪ್ರತಿಜ್ಞೆ ಮಾಡಿ ನುಡಿಯುವನು. ಗಿರಾಕಿಗಳು ದೇವರ ಹೆಸರುಗೊಂಡು ಆಡಿದ ಮಾತಿನಲ್ಲಿ ನೂರೆಂಟು ಚಿಕಿತ್ಸೆ ಮಾಡದೆ ಅವನು ಹೇಳಿದಷ್ಟೇ ಬೆಲೆ ಕೊಟ್ಟು ಕೊಂಡುಕೊಳ್ಳುವರು.

ನೇಕಾರನು ದಿನಾಲು ರಾತ್ರಿ ಬಹಳ ಹೊತ್ತು ಮನೆಯ ಬಾಗಿಲಲ್ಲಿ ಕುಳಿತು ಹರಿಭಜನೆ ಮಾಡುತ್ತಿರುವನು. ಮಧ್ಯ ರಾತ್ರಿಯು ಮೀರಿದ ಬಳಿಕ ಒಳಗೆ ಹೋಗಿ ಮಲಗಿಕೊಳ್ಳುವನು. ಒಂದು ದಿನ ಈ ರೀತಿ ಹರಿಭಜನೆ ಮಾಡುತ್ತ ಕುಳಿತಿರಲು ಕೆಲವರು ಕಳ್ಳರು ಊರೊಳಗಿನ ಸಾವುಕಾರನ ಮನೆಗೆ ಸುಲಿಗೆಗೆಂದು ಹೊರಟಿರುವಾಗ ನೇಕಾರನನ್ನು ನೋಡಿ ತಮಗೊಂದು ಆಳು ದೊರೆತಿದನೆಂದು ತಿಳಿದು ಹತ್ತಿರ ಬಂದು ತಮ್ಮ ಸಂಗಡ ನಡೆಯೆಂದು ಅವನನ್ನು ಬೆದರಿಸಿದರು. ನೇಕಾರನು "ಭಗವಂತನ ಇಚ್ಛೆಯಂತಾಗಲಿ" ಎಂದು ಅವರೊಡನೆ ನಡೆದನು. ತುಡುಗರು ಸಾವುಕಾರನ ಮನೆಯನ್ನು ಸುಲಿದು ತಾವು ಹೊರುವಷ್ಟು ಬೆಳ್ಳಿ ಬಂಗಾರಗಳನ್ನು ಹೊತ್ತುಕೊಂಡದ್ದಲ್ಲದೆ ಈ ನೇಕಾರನ ತಲೆಯ ಮೇಲೆಯೂ ಒಂದು ಹೊರೆಯನ್ನು ಹೇರಿದರು. "ಭಗವಂತನ ಇಚ್ಛೆ" ಎಂದು ನೇಕಾರನು ಹೊರೆಯನ್ನು ಹೊತ್ತುಕೊಂಡು ಅವರ ಹಿಂದೆ ನಡೆದನು. ಸಾವುಕಾರನ ಮನೆ ಸುಲಿಗೆಯಾದುದನ್ನು ಕೇಳಿದೊಡನೆ ಊರ ಕಾವಲುಗಾರರಾದ ರಾಜಭಟರು ತುಡುಗರು ಹೋದ ಹಾದೀ ಹಿಡಿದು ಓಡುತ್ತ ಬಂದರು. ರಾಜದೂತರ ಸುಳಿವು ಹತ್ತಿದೊಡನೆಯೇ ತುಡುಗರು ದಿಕ್ಕು ದಿಕ್ಕಿಗೆ ಓಡಿದರು. ನಿರಪರಾಧಿ

ಯಾದ ನೇಕಾರನು ಸಿಕ್ಕುಬಿದ್ದನು. ರಾಜದೂತರು ಅವನ ಕೈಗೆ ಸಂಕೋಲೆಯನ್ನು ತೊಡಿಸಿ ಚಾವಡಿಗೆ ಒಯ್ದರು. ದೇವರ ಇಚ್ಛೆ ಇದ್ದಂತಾಗಲಿ ಎನ್ನುತ್ತ ನೇಕಾರನು ಅವರನ್ನು ಹಿಂಬಾಲಿಸಿ ನಡೆದನು. ಮೂರನೆಯ ದಿನ ಗ್ರಾಮಾಧಿಕಾರಿಯ ಇದಿರಿಗೆ ನೇಕಾರನ ಅಪರಾಧದ ವಿಚಾರಣೆಗೆ ಆರಂಭವಾಯಿತು. ತಾವೆಲ್ಲರೂ ನಂಬಿಗೆಯುವನೂ ಸತ್ಯವಂತನೂ ಎಂದು ತಿಳಿದಿದ್ದ ನೇಕಾರನು ಕಳವು ಮಾಡಿರುವನೆಂದೂ ಅವನ ಅಪರಾಧದ ವಿಚಾರಣೆ ನಡೆಯುವದೆಂದೂ ಕೇಳಿ ಹಳ್ಳಿಯ ಪ್ರಮುಖರೆಲ್ಲರು ಆಶ್ಚರ್ಯದಿಂದ ಅಲ್ಲಿ ನೆರೆದರು. ತಮ್ಮ ಜಾಡನು ತುಡುಗು ಮಾಡಿರುವನೆಂಬ ಮಾತನ್ನು ಅವರು ಎಷ್ಟು ಮಾತ್ರವೂ ನಂಬಿರಲಿಲ್ಲ.

ನೇಕಾರನ ಅಪರಾಧದ ವಿಚಾರಣೆಗೆ ಆರಂಭವಾಯಿತು. ಇವನು ದೇವರ ಹೆಸರು ಸ್ಮರಿಸಿ ನಡೆದ ಸಂಗತಿಯನ್ನೆಲ್ಲ ಒಂದುಳಿಯದಂತೆ ಗ್ರಾಮಾಧಿಕಾರಿಯ ಇದಿರಿಗೆ ಹೇಳಿಕೊಂಡನು. ಕೊನೆಗೆ ದೇವರ ಇಚ್ಛಾನುಸಾರವಾಗಿ ತನಗೆ ಎಂತಹ ಶಿಕ್ಷೆಯಾದರೂ ಅವನ್ನು ಆನಂದದಿಂದಲೇ ಅನುಭವಿಸುವೆನೆಂದು ನುಡಿದು ಕೈಮುಗಿದುಕೊಂಡು ದೇವರ ಸ್ಮರಣೆ ಮಾಡುತ್ತ ನಿಂತುಕೊಂಡನು. ನ್ಯಾಯಾಧಿಕಾರಿಯು ನೀನು ಹೇಳುವ ಮಾತಿಗೆ ಯಾರಾದರೂ ಸಾಕ್ಷಿಯಾಗಿ ನುಡಿಯುವವರಿರುವರೋ ಎಂದು ಕೇಳಿದನು,

ನೇಕಾರ:— ಆ ಭಗವಂತನೊಬ್ಬನೇ ಸಾಕ್ಷಿ ಆ ಸರ್ವ ಸಾಕ್ಷಿಯಾದ ಭಗವಂತನನ್ನು ಮಿಕ್ಕುಳಿದ ಸಾಕ್ಷಿಗಳೆಂದರೆ ನನ್ನನ್ನು ಎಳೆದುಕೊಂಡು ಹೋಗಿ ಕಳುವಿನ ಬದುಕು ಹೊರಿಸಿದ ತುಡುಗರು.

ನ್ಯಾಯಾಧಿಕಾರಿ:— ಆ ಭಗವಂತನು ಇಲ್ಲವೆ ಆ ತುಡುಗರು ಬಂದು ನಿನ್ನ ಹೇಳಿಕೆಯನ್ನು ನಿಜವೆಂದು ಹೇಳುವ ಸಂಭವವಿಲ್ಲ. ತದ್ವಿರುದ್ಧವಾಗಿವಾಗಿ ನೀನು ಕಳವು ಮಾಡಿರುವೆಯೆಂಬುದಕ್ಕೆ ಮಾತ್ರ ಸಾಕಷ್ಟು ಆಧಾರಗಳಿವೆ. ರಾಜದೂತರು ಕಳುವಿನ ಒಡವೆ ಸಹಿತವಾಗಿ ನಿನ್ನನ್ನು ಹಿಡಿದು ತಂದಿರುವರು. ಹೀಗಿರುವುದರಿಂದ ನಿನಗೆ ಯೋಗ್ಯ ಶಿಕ್ಷೆಯನ್ನು ವಿಧಿಸುವುದು ನ್ಯಾಯಾಧಿಕಾರಿಯಾದ ನನ್ನ ಕರ್ತವ್ಯವಾಗಿದೆ.

ನೇಕಾರಃ— ಆಗಬಹುದು. ಸರ್ವಾಂತರ್ಯಾಮಿಯೂ ಸರ್ವ ಸಾಕ್ಷಿಯೂ ನ್ಯಾಯಾಧೀಶರ ನ್ಯಾಯಾಧೀಶನೂ ಆದ ಭಗವಂತನೇ ನನ್ನ ನಿರಪರಾಧಿತ್ವದ ಸಾಕ್ಷಿ; ಆತನೇ ನನ್ನ ನ್ಯಾಯಾಧಿಕಾರಿ; ಆತನೇ ನಿಮ್ಮಲ್ಲಿಯೂ ಇದ್ದಾನೆ; ನನ್ನಲ್ಲಿಯೂ ಇದ್ದಾನೆ. ನಿಮ್ಮಲ್ಲಿದ್ದು ಶಿಕ್ಷೆಯನ್ನು ವಿಧಿಸಿದರೆ ನನ್ನಲ್ಲಿದ್ದು ಆ ಶಿಕ್ಷೆಯನ್ನು ಆತನೇ ಅನುಭವಿಸುವನು. ನನಗೀಗ ೫೦ ವರ್ಷ ವಯಸ್ಸಾಗಿದೆ. ಈ ಅವಧಿಯಲ್ಲಿ ನಾನು ಎಂದಾವರೂ ಯಾರದಾದರೂ ಒಡವೆಯನ್ನು ಅಪಹರಿಸಿದ ಇಲ್ಲವೆ ಒಂದಾದರೂ ಸುಳ್ಳು ಮಾತಾಡಿದ ಉದಾಹರಣೆಯಿದ್ದರೆ ಈ ನೆರೆದವರೆ ಹೇಳಲಿ.

ನೆರೆದವರೆಲ್ಲರೂ ಏಕ ಕಂಠದಿಂದ ನೇಕಾರನ ಸದಾಚರಣೆಯನ್ನು ಪ್ರತಿಪಾದಿಸಿದರು. ಭಗವಂತನ ಪ್ರೇರಣೆಯಿಂದಲೇ ನ್ಯಾಯಾಧಿಕಾರಿಯು ನೇಕಾರನು ನಿರಪರಾಧಿಯೆಂದು ನಿರ್ಣಯಿಸಿದನು.

ನೇಕಾರನು ನಿಜವಾಗಿ ನಿರಪರಾಧಿಯಾಗಿದ್ದರೂ ಕಾಯದೆಯಿಂದ ಬದ್ಧನಾದ ನ್ಯಾಯಾಧೀಶನು ಅವನಿಗೆ ಎಂತಹ ಶಿಕ್ಷೆಯನ್ನು ವಿಧಿಸುವನೋ ಎಂದು ನೆರೆದವರೆಲ್ಲ ಗಾಬರಿಯಾಗಿದ್ದರು. ಈ ನಿರ್ಣಯವನ್ನು ನೋಡಿ ಅವರಿಗೆ ತುಂಬ ಸಂತೋಷವಾಯಿತು. ಆತನು ಜಾತಿಯಿಂದ ಜಾಡನಾಗಿದ್ದರೂ ನೀತಿಯಿಂದ ಸರ್ವರಿಗೂ ವಂದ್ಯನೆಂಬದೂ ಅವನಂತಹ ಸತ್ಯವಂತನು ಬೇರೊಬ್ಬನಿಲ್ಲವೆಂಬದೂ ಊರವರಿಗೆ ತಿಳಿದ ಮಾತೇ ಆಗಿತ್ತು. ಆದರೂ ಅಂದಿನ ಆ ಸಂಗತಿಯಿಂದ ಅವರೆಲ್ಲರಿಗೆ ಜಾಡನ ವಿಷಯವಾಗಿ ಇನ್ನಷ್ಟು ಆದರವುಂಟಾಯಿತು.

ಸೃಷ್ಟಿಕರ್ತನಲ್ಲಿ ಅಚಲವಾದ ವಿಶ್ವಾಸವನ್ನಿಟ್ಟ ನೇಕಾರನು ಮುಂದಿನ ಆಯುಷ್ಯವನ್ನು ಸುಖದಿಂದ ಕಳೆದನೆಂಬದನ್ನು ಪುನಃ ಹೇಳಬೇಕಾಗಿಲ್ಲ.

ಸಾಂ॥ ಬಡತನದ ಬಾಳುವೆಯ ಕಡು ಬಕುತ ಜಾಡನು।
ತುಡುಗಿನಾರೋಪದಲ್ಲಿರಲು ॥
ಪೊಡವಿಯೊಡೆಯನಲ್ಲಿ ಕಡು ಬಕುತಿಯನ್ನಿರಿಸಿ ।
ಪಡೆದನ್ನ ತಾಣ ಮೋಕ್ಷವನು ॥

## ೧೨. ಹಡಗದೊಳಗಿನ ಹಕ್ಕಿ.

ಗಂಗಾನದಿಯಲ್ಲಿ ಸಂಚರಿಸುವ ಒಂದು ಹಡಗದ ಪಟಸ್ತಂಭದ ಕೊನೆಯಲ್ಲಿ ಒಂದು ಹಕ್ಕಿಯು ಗೂಡುಕಟ್ಟಿಕೊಂಡು ವಾಸವಾಗಿತ್ತು. ಹಗಲು ಅತ್ತಿತ್ತ ಹಾರಿಹೋಗಿ ದಂಡೆಯಲ್ಲಿ ಮೇದು ಬಂದು ರಾತ್ರಿ ಆ ತನ್ನ ಗೂಡಿನಲ್ಲಿರುತ್ತಿತ್ತು. ಹೀಗೆಯೇ ಕೆಲವು ದಿನಗಳು ಕಳೆಯಲು ಒಮ್ಮೆ ಆ ಹಡಗವು ಅದೇನೋ ಕೆಲಸದ ಸಲುವಾಗಿ ಸಮುದ್ರದಲ್ಲಿ ಪ್ರಯಾಣಕ್ಕಾಗಿ ಹೊರಟಿತು. ಹಡಗವು ಸಮುದ್ರದಲ್ಲಿ ಬಹುದೂರ ಹೋಗುವವರೆಗೂ ಗೂಡಿನೊಳಗಿರುವ ಪಕ್ಷಿಗೆ ಅರಿವೇ ಇರಲಿಲ್ಲ. ಅನುಕೂಲವಾದ ಗಾಳಿಯಿರುವಾಗ ರಾತ್ರಿಯೆಲ್ಲಾ ಪ್ರವಾಸ ಮಾಡಿದಬಳಿಕ ಹಡಗು ನಿಂತಿತು. ಸುತ್ತಲಿನ ಕತ್ತಲೆ ಹರಿದು ಬೆಳಗಾದಬಳಿಕ ಪಕ್ಷಿಯು ದಿನದಂತೆ ದಂಡೆಗೆ ಹೋಗಬೇಕೆಂದು ಹೊರಗೆ ಬಂದಿತು. ಆದರೆ ಎತ್ತನೋಡಿದತ್ತ ನೀರೇ ನೀರಾಗಿರುವದನ್ನು ನೋಡಿ ಹಕ್ಕಿಯು ಎದೆಯೊಡೆದು ನೀರಾಯಿತು. ಯಾವದಿಕ್ಕಿಗೆ ಹೋದರೆ ದಂಡೆ ಇರಬಹುದೆಂಬ ನಿಶ್ಚಿತವಾದ ತಿಳಿವು ಆ ಪಕ್ಷಿಗಿರಲಿಲ್ಲ. ಅದು ಒಮ್ಮೆ ಪೂರ್ವದಕಿಟ್ಟಿಗೆ ಹೊರಟು ಬಹುದೂರ ಹಾರಿತು. ಎಷ್ಟುದೂರ ಹಾರಿದರೂ ಕೇವಲ ನೀರೇನೀರಲ್ಲದೆ ದಂಡೆಯು ತೋರಲಿಲ್ಲ. ಹೀಗೆಯೇ ಮುಂದೆ ನಡೆದರೆ ಹಡಗವೂ ಕಾಣದಂತಾಗಿ ಬಿಟ್ಟರೆ ಮುಂದೇನುಗತಿಯೆಂದು ಅಂಜಿಕೆಯುಂಟಾಗಲು ಹಕ್ಕಿಗೆ ಮುಂದೆ ಹಾರಲು ಪಕ್ಕಗಳೇ ಏಳಲಿಲ್ಲ. ಕೂಡಲೆ ಅದು ತಿರುಗಿ ಬಂದು ಹಡಗದ ಕಂಬದಲ್ಲಿ ಕುಳಿತಿತು. ಮತ್ತೆರಡು ಗಳಿಗೆಯಮೇಲೆ ಪಶ್ಚಿಮದಿಕ್ಕಿಗೆ ಹಾರಿಹೋಗಿ ನೋಡಲು ಮೊದಲಿನಂತೆಯೇ ಅಂಜಿಕೆಯುಂಟಾಗಲು ತಿರುಗಿ ಬಂದಿತು. ಇದೇ ರೀತಿಯಾಗಿ ನಾಲ್ಕೂ ದಿಕ್ಕಿಗೂ ಹಾರಿ ದಂಡೆಯನ್ನು ಕಾಣದೆ ತಿರುಗಿಬಂದು, ದಂಡೆಗೆ ಹೋಗಬೇಕೆಂಬ ಮನಸ್ಸಿನ ಆಶೆಯನ್ನು ತೊರೆದು, ಸುಮ್ಮನೆ ತನ್ನ ಗೂಡಿನಲ್ಲಿ ಕುಳಿತಿತು. ಒಂದೆರಡು ದಿನಗಳ ತರುವಾಯ ಹಡಗವು ತನ್ನ ಸಮುದ್ರದ ಪ್ರವಾಸ ಮುಗಿಸಿ ಮೊದಲಿನಸ್ಥಳಕ್ಕೆ ಬಂದಿತು. ಪಕ್ಷಿಯು ಮೊದಲಿನಂತೆ ಸುಖದಿಂದ ಉಳಿಯಿತು.

ಸಂಸಾರಸಾಗರದಲ್ಲಿಯೂ ಇದರಂತೆಯೇ ಕೇವಲ ಭಗವಂತನ ಆಶ್ರಯವನ್ನೇ ನಂಬಿ ಆಶೆಯನ್ನು ತೊರೆದು ನಡೆದರೆ ಮನುಷ್ಯನು ಸುಖಿಯಾಗುವನು.

ಸಾಂ ॥ ಹಡಗಿನ ಹಕ್ಕಿ ಸಾಗರದಲ್ಲಿ ಹಾರಾಡಿ । ದಡವ ಕಾಣದೆ ಕಟ್ಟಕಡೆಗೆ ॥
ಹಡಗನ್ನೇ ಸೇರುವಂತಾ ಭಗವಂತನೊ । [illegible] ಮಾನವನೆ ॥

## ೧೨. ಸನ್ಯಾಸಿಯೂ ಕಟ್ಟಿಗೆ ಮಾರುವವನೂ.

ಬಡವನಾದ ಒಕ್ಕಲಿಗನೊಬ್ಬನು ದಿನಾಲು ಅಡವಿಗೆ ಹೋಗಿ ಕಟ್ಟಿಗೆಯನ್ನು ಕಡಿದು ತಂದು ಊರೊಳಗೆ ಮಾರಿ ಹೊಟ್ಟೆ ತುಂಬಿಕೊಳ್ಳುತ್ತಿದ್ದನು. ಒಂದು ದಿನ ಅಡವಿಯಲ್ಲಿ ಕಟ್ಟಿಗೆ ಕಡಿಯುತ್ತಿರುವಾಗ ಒಬ್ಬ ಸನ್ಯಾಸಿಯನ್ನು ನೋಡಿ ಅವನ ಬಳಿಗೆ ಹೋಗಿ ಭಯಭಕ್ತಿಯಿಂದ ನಮಸ್ಕಾರ ಮಾಡಿದನು. ಆಗ ಸನ್ಯಾಸಿಯು—ತಮ್ಮಾ, ಇಲ್ಲಿಯೇ ಕಟ್ಟಿಗೆಯನ್ನು ಕಡಿಯದೆ ಇನ್ನೂ ತುಸು (ಸ್ವಲ್ಪ) ಮುಂದಕ್ಕೆ ಹೋಗಿ ನೋಡು. ಇದರಿಂದ ನಿನಗೆ ಹೆಚ್ಚು ಲಾಭವಾಗುವದು ಎಂದು ಹೇಳಿ ತನ್ನ ಕೆಲಸದಲ್ಲಿ ತೊಡಗಿದನು.

ಒಕ್ಕಲಿಗನಿಗೆ ಅಡವಿಯೊಳಗೆ ದೂರ ಹೋಗಿ ಕಟ್ಟಿಗೆ ಕಡಿದರೆ ಹೆಚ್ಚು ಲಾಭವಾಗುವದೆಂಬ ಮಾತಿನ ಅರ್ಥವಾಗಲಿಲ್ಲ. ಅಡವಿಯ ನಡುವಿನ ಕಟ್ಟಿಗೆಯಾದರೇನು? ದಂಡೆಯಲ್ಲಿಯ ಕಟ್ಟಿಗೆಯಾದರೇನು? ಅಡಿಗೆಗೆ ಎಲ್ಲಾ ಕಟ್ಟಿಗೆಯೂ ಒಂದೇಸರಿ. ಇಂತಿರುವಾಗ ನನಗೆ ಲಾಭವಾಗುವ ಬಗೆಯೆಂತು ? ಎಂದು ಒಕ್ಕಲಿಗನು ಆಲೋಚಿಸಿದನು. ಆದರೂ ಸಜ್ಜನರ ಮಾತಿನಲ್ಲಿ ಸತ್ಯವಿರುವದೆಂಬುದನ್ನು ನಂಬಿ ಮಾರನೆಯ ದಿನ ಕಟ್ಟಿಗೆಗೆ ಬಂದವನು ಅಡವಿಯೊಳಗೆ ತುಸು ದೂರ ಸೇರಿ ನೋಡಿದನು. ಅಲ್ಲಿ ಬರೇ ಚಂದನದ ಗಿಡಗಳೇ ಬೆಳೆದಿದ್ದವು. ಇದನ್ನು ನೋಡಿ ಒಕ್ಕಲಿಗನಿಗೆ ತುಂಬಾ ಸಂತೋಷವಾಯಿತು. ಅವನು ಮನಸ್ಸಿನಲ್ಲಿಯೇ ಸನ್ಯಾಸಿಯನ್ನು ಮತ್ತೊಮ್ಮೆ ವಂದಿಸಿದನು ಬಳಿಕ ಒಂದೆರಡು ಒಣಗಿದ ಗಿಡಗಳನ್ನು ನೋಡಿ ಕಟ್ಟಿಗೆ ಕಡಿದುಕೊಂಡು ಊರೊಳಗೆ ಬಂದು ಮಾರಲು ದಿನಾಲು ದೊರೆಯುವ ಹಣದ ನಾಲ್ಕುಪಟ್ಟು ಬೆಲೆ ಬಂದಿತು. ಸಜ್ಜನರ ಮಾತಿನಂತೆ ನಡೆದದ್ದರ ಫಲವೆಂದು ಭಾವಿಸಿಕೊಂಡು ಒಕ್ಕಲಿಗನು ಮನೆಗೆ ನಡೆದನು.

ಹೀಗೆಯೇ ೮–೧೦ ದಿನಗಳು ಕಳೆಯಲು ಮತ್ತೊಮ್ಮೆ ಅದೇ ಸನ್ಯಾಸಿಯು ಅಡವಿಯಲ್ಲಿ ಅಡ್ಡಾಡುತ್ತಿರುವುದನ್ನು ಕಟ್ಟಿಗೆಯವನು ಅಕಸ್ಮಾತ್ತಾಗಿ ನೋಡಿದನು; ಕೂಡಲೇ ಕಡಿಯುವುದಕ್ಕೆ ಎತ್ತಿದ ಕೊಡಲಿಯನ್ನು ಅಲ್ಲಿಗೇ ನಿಲ್ಲಿಸಿ ಓಡಿಬಂದು ಸನ್ಯಾಸಿಗೆ ನಮಸ್ಕಾರ ಮಾಡಿದನು. ಸನ್ಯಾಸಿಯು ಮೊದಲಿನಂತೆ ತಮ್ಮಾ ಇನ್ನೂ ತುಸು ಮುಂದೆ ಹೋಗಿ ನೋಡು, ಎಂದು ಉಪದೇಶ ಮಾಡಿದನು.

ಮೂರನೆಯದಿನ ಒಕ್ಕಲಿಗನು ಅಡವಿಯಲ್ಲಿ ಮತ್ತಿಷ್ಟು ದೂರ ಹೋಗಿ ನೋಡಲು ಅಲ್ಲಿ ದೊಡ್ಡ ದೊಡ್ಡ ತಾಮ್ರದ ಅದುರುಗಳು ಬಿದ್ದಿದ್ದವು. ಅವನು ಆ ಅದುರುಗಳನ್ನು ತಂದು ಮಾರಿ ಹೆಚ್ಚುಹಣ ಗಳಿಸಿದನು. ಸನ್ಯಾಸಿಯ ಮಾತಿನಲ್ಲಿ ತುಂಬಾ ಸತ್ಯವಿರುವದೆಂದು ನಂಬಿದ ಒಕ್ಕಲಿಗನು ಮೂರನೆಯದಿನ ಇನ್ನಷ್ಟು ದೂರಹೋಗಿ ನೋಡಲು ಅಲ್ಲಿ ಬಂಗಾರದ ಅದುರುಗಳು ನೆಲದಮೇಲೆ ಹರಡಿ ಕೊಂಡಿದ್ದವು. ಅವುಗಳನ್ನು ತಂದು ಮಾರಿ ಒಕ್ಕಲಿಗನು ಒಳ್ಳೇ ಶ್ರೀಮಂತನಾದನು. ಮತ್ತೆ ಕೆಲವು ದಿನಗಳ ತರುವಾಯ ಒಕ್ಕಲಿಗನು ಅಡವಿಯ ನಡುವೆ ಒಂದೆಡೆಯಲ್ಲಿ ತರತರದ ರತ್ನಗಳು ನೆಲದ ಮೇಲೆ ಬಿದ್ದಿದ್ದನ್ನು ಸೇರಿ ನೋಡಿ ಪುನಃ ಸನ್ಯಾಸಿಯ ಉಪಕಾರವನ್ನು ಸ್ಮರಿಸಿ ಉಡಿತುಂಬ ಬಗೆ ಬಗೆಯ ರತ್ನಗಳನ್ನು ತುಂಬಿಕೊಂಡು ಮನೆಗೆ ಬಂದು ಸುಖವಾಗಿದ್ದನು.

ಸಜ್ಜನರ ಮಾತಿನಲ್ಲಿ ವಿಶ್ವಾಸವೂ ಅವರ ಹೇಳಿಕೆಯಂತೆ ನಡೆಯಬೇಕೆಂಬ ಒಳ್ಳೆಯ ವಿವೇಕವೂ ಉಳ್ಳವರಿಗೆ ಲೋಕದಲ್ಲಿ ಸುಖವು ನಿಶ್ಚಯವಾಗಿ ದೊರೆಯುವದು. ಗುರುಹಿರಿಯರ ಮಾತಿನಂತೆ ನಡೆಯುವ ಪ್ರಸಂಗದಲ್ಲಿ ಮನುಷ್ಯನು ತಾತ್ಕಾಲಿಕ ಕಷ್ಟಕ್ಕೆ ಅಂಜಿ ಹಿಂಜರಿದರೆ ಮುಂದಿನ ಸ್ಥಿರವಾದ ಸುಖವನ್ನೇ ಕಳೆದುಕೊಳ್ಳಬೇಕಾಗುವದು.

ಸತ್ಯ ವಸ್ತುವಿನ ಜ್ಞಾನವನ್ನು ಪಡೆಯಬೇಕಿದ್ದರೂ ಕೂಡ (ಈಶ್ವರನ ಸಾಕ್ಷಾತ್ಕಾರವಾಗಬೇಕಿದ್ದರೂ ಕೂಡ) ಇದೇ ರೀತಿಯಾಗಿ ಜಗತ್ತಿನ ಜ್ಞಾನಸಮುದ್ರದಲ್ಲಿ ಹೆಚ್ಚು ಹೆಚ್ಚು ಶ್ರಮಪಟ್ಟು ಮುಳುಗಿ ತಳವನ್ನು ಶೋಧಿಸಲು ಯತ್ನಿಸಬೇಕು. ಅನುಭವಜ್ಞರಾದ ಜ್ಞಾನಿಗಳು ಹೇಳುವ ಉಪದೇಶಗಳನ್ನು ದೃಢವಾಗಿ ನಂಬಿ ನಡೆಯಬೇಕು. ಪ್ರಪಂಚಚಾಲಕನ ವಿಚಾರ ಮಾರ್ಗದಲ್ಲಿ ಮುಂದೆ ಮುಂದೆ ಪ್ರವಾಸ ಮಾಡಿದಂತೆ ಅನೇಕ ಸತ್ಯ ತತ್ವಗಳ ಜ್ಞಾನವುಂಟಾಗಿ ಕಡೆಗೆ ರತ್ನಕರನಾದ ಭಗವಂತನ ಸಾನ್ನಿಧ್ಯವನ್ನೇ ಹೊಂದುವೆವು.

ಸಾರ || ಸಾಧು ಸಂತರು ನಮಗೆ ಬೋಧಿಸುವ ಸನ್ಮಾರ್ಗ |
ಬೋಧೆಯಂತೆಯೆ ವರ್ತಿಸಧರೆ ||
ಮಾಧವನ ಕರುಣೆಯನು ಪಡೆಯುತ್ತ ಲಿಹಪರವ |
ಸಾಧಿಸಲು ಬಹು ಸುಲಭವಹುದು ||

## ೧೩. ಬ್ರಾಹ್ಮಣನ ಭಕ್ತಿಪರೀಕ್ಷೆ.

ಒಂದು ಊರಲ್ಲಿ ಒಬ್ಬ ವೈದಿಕ ಬ್ರಾಹ್ಮಣನಿದ್ದನು. ಊರೊಳಗಿನ ಗೌಳಿಗರಿಗೆಲ್ಲ ಅವನೇ ಪುರೋಹಿತನು ಅವರ ಶುಭಾಶುಭ ಕಾರ್ಯಗಳನ್ನೆಲ್ಲ ಆ ಪುರೋಹಿತನೆ ಮಾಡಿಸುವನು. ಆದುದರಿಂದ ಅವರಿಗೆ ಆತನಲ್ಲಿ ಅಚಲವಾದ ಶ್ರದ್ಧೆಯಿದ್ದಿತು;—ಅವನು ತೋರಿಸಿದ್ದೇ ಹೆದ್ದಾರಿ. ಅವನು ಹೇಳಿದ್ದೇ ಬ್ರಹ್ಮವಾಕ್ಯ.

ಪುರೋಹಿತನ ಮನೆಗೆ ಒಬ್ಬ ಗೌಳಿಗಿತ್ತಿಯು ದಿನಾಲು ಹಾಲು ತಂದು ಕೊಡುತ್ತಿದ್ದಳು. ಅವಳು ಹಾಲು ತರುವದಕ್ಕೆ ಕುಸು ತಡವಾಗುವದನ್ನು ನೋಡಿ ಒಮ್ಮೆ ಬ್ರಾಹ್ಮಣನು ಸಿಟ್ಟಿಗೆದ್ದು ನೀನು ಹೀಗೆ ತಡಮಾಡಿ ಹಾಲು ತರುವದಾದರೆ ನಮಗೆ ನಿನ್ನ ಹಾಲೇ ಬೇಡ. ಮನೆಯಲ್ಲಿ ಚಿಕ್ಕಕೂಸು ಅತ್ತು ಅತ್ತು ಹಣ್ಣಾಗುತ್ತಿದೆ. ನೀನು ಸೂರ್ಯೋದಯವಾಗುವದರೊಳಗಾಗಿ ಹಾಲು ತಂದು ಕೊಡುವಂತಿದ್ದರೆ ಸರಿ. ಇಲ್ಲವಾದರೆ ನಾವು ಬೇರೆ ಕಡೆಗೆ ನೋಡಿಕೊಳ್ಳುವೆವು ಎಂದು ಬೆದರಿಸಿದನು.

ಪುರೋಹಿತನು ಕೋಪಗೊಂಡದ್ದನ್ನು ನೋಡಿ ಗೌಳಿಗಿತ್ತಿಯು ಅಂಜಿದಳು. ಅವಳು ಸ್ವಾಮಿ, ಏನು ಮಾಡಲಿ? ಎಂಟು ದಿನಗಳಿಂದಲೂ ಸ್ವಲ್ಪ ತಡವಾಗುತ್ತದೆ. ಗಂಗೆಯಲ್ಲಿ ನೀರು ತುಂಬಿರುವದು. ನಾವಿಕರು ನನ್ನನ್ನು ಬೇಗನೆ ದಾಟಿಸುತ್ತಿರುವದಿಲ್ಲ. ನಿನಗೊಬ್ಬಳಿಗಾಗಿಯೇ ನಾವೇಕೆ ದೋಣಿಯನ್ನು ಬಿಡೋಣ! ನೀನೇನು ನಾಲ್ಕಾಣೆ ಕೊಡುವೆಯಾ? ಕೊಡುವದು ಮೂರು ಕಾಸು (ಒಂದು ದುಡ್ಡು.) ಇಷ್ಟಕ್ಕಾಗಿ ನಾವೇಕೆ ಕಷ್ಟಪಡಬೇಕು. ಇನ್ನೂ ನಾಲ್ಕಾರು ದಾರಿಕಾರರು ಬರಲಿ, ಎನ್ನುತ್ತಿದ್ದಾರೆ. ಆದುದರಿಂದ ನನಗೆ ತಡವಾಗುವದು. ನದಿಯನ್ನು ದಾಟಿ ಬರುವದು ನನ್ನ ಕೈಯಲ್ಲಿರುವದೇ? ಎಂದು ಬಿನ್ನವಿಸಿಕೊಂಡಳು.

ಪುರೋಹಿತನು ತನ್ನ ಆಡಂಬರದ ನಡತೆಗನುಸಾರವಾಗಿ "ಇದಕ್ಕೇಕೆ ಇಷ್ಟೊಂದು ಯೋಚನೆ? ಭಕ್ತಿಪೂರ್ವಕವಾಗಿ ಭಗವಂತನ ನಾಮಸ್ಮರಣೆ ಮಾಡುತ್ತ ನಡೆದರೆ ಗಂಗೆಯು ಕೂಡ ತನ್ನ ಒಡಲಲ್ಲಿ ದಾರಿಯನ್ನು ಕೊಟ್ಟು ಬಿಡುವಳು. ಆ ನಾವಿಕರ [illegible] ಸಲುವಾಗಿ ನೀನು ಚಿಂತಿಸಬೇಕೆ? ಎಂದು ಗೌಳಿಗಿತ್ತಿಗೆ ಉಪದೇಶ ಮಾಡಿದನು. ಕೇವಲ ಶಾಬ್ದಿಕ ಭಕ್ತಿಯನ್ನು ಬೋಧಿಸುವ ಪುರೋಹಿತನ ಅಂತರಂಗ [illegible] ಇಲ್ಲ. ಭಗವಂತನ ಅಗಾಧ ಮಹಿಮೆಯಲ್ಲಿ ಅತ್ಯಂತ ಶ್ರದ್ಧೆಯುಳ್ಳ ಗೌಳಿಗಿತ್ತಿಯು ಪುರೋಹಿತನ ಮಾತನ್ನು ನಂಬಿ, ಸ್ವಾಮಿ, ಹಾಗೆಯೇ [illegible]. ನಾಳಿನಿಂದ ನಾವಾಡಿಗರ ದಾರಿಯನ್ನು ನೋಡದ ಭಗವಂತನ

ಕರುಣೆಯಿಂದ ಗಂಗೆಯನ್ನು ದಾಟಿ ತಮಗೆ ಸೂರ್ಯೋದಯವಾಗುವದಕ್ಕಿಂತಲೂ ಮೊದಲೇ ಹಾಲನ್ನು ತಂದು ಕೊಡುವೆನು. ಎಂದು ನುಡಿದು ಮನೆಗೆ ನಡೆದಳು.

ಮಾರನೆಯ ದಿನದಿಂದ ಗೌಳಿಗಿತ್ತಿಯು ಸೂರ್ಯೋದಯವಾಗುವದಕ್ಕಿಂತ ಮೊದಲೇ ಪುರೋಹಿತನ ಮನೆಗೆ ಹಾಲು ತಂದುಕೊಡಹತ್ತಿದ್ದಳು. ಹೀಗೆಯೇ ಕೆಲವು ದಿನಗಳು ಕಳೆಯಲು ಮತ್ತೊಮ್ಮೆ ಪುರೋಹಿತನು ಏನಮ್ಮಾ, ನೀನು ಈಗ ಹೊತ್ತಿಗೆ ಸರಿಯಾಗಿ ಹಾಲು ತಂದುಕೊಡುತ್ತಿರುವೆ! ಮೊದಲು ನಾವಾಡಿಗರ ನೆವ ಹೇಳಿ, ನಮ್ಮ ಹಸುಗೂಸನ್ನು ಹಸಿವೆಯಿಂದ ಬಳಲಿಸುತ್ತಿದ್ದೆಯಲ್ಲವೆ! ಎಂದನು.

ಗೌಳಿಗಿತ್ತಿ ತಾವು ಉಪದೇಶಿಸಿದ ಭಗವನ್ನಾಮಸ್ಮರಣೆಯ ಬಲದಿಂದ ದಂ? ಯನ್ನು ದಾಟಿ ಬರುತ್ತಿರುವೆನೆಂದು ಬಿನ್ನವಿಸಿಕೊಂಡಳು.

ಪುರೋಹಿತನಿಗೆ ಆ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ. ಅವನು ಗೌಳಿಗಿತ್ತಿ ಯೊಡನೆ ಗಂಗಾತೀರಕ್ಕೆ ಬಂದನು. ಗೌಳಿಗಿತ್ತಿಯು ಎಂದಿನಂತೆ ಭಗವಂತನನ್ನು ಸ್ಮರಿಸುತ್ತ ನದಿಯ ಜಲದಲ್ಲಿ ಶಿಲೆಯ ಮೇಲೆ ನಡೆಯುವಂತೆ ನಡೆಯ ತೊಡಗಿದಳು. ಅದನ್ನು ನೋಡಿ ಪುರೋಹಿತನು ಆಶ್ಚರ್ಯದಿಂದ ತಾನೂ ಗಟ್ಟಿಯಾಗಿ ನಾರಾಯಣ, ನಾರಾಯಣ ಎಂದು ಒದರುತ್ತ ನದಿಯಲ್ಲಿ ಇಳಿದನು. ಮುಂದೆ ಹೋಗುತ್ತಿರುವ ಗೌಳಿಗಿತ್ತಿಯು ತಿರುಗಿ ನೋಡಿ ಸ್ವಾಮೀ, ತಮಗೆ ಭಗವಂತನ ಮಹಿಮೆಯಲ್ಲಿ ವಿಶ್ವಾಸವಿರುವಂತೆ ತೋರುವದಿಲ್ಲ. ಧೋತರವನ್ನೇಕೆ ಏರಿಸಿ ಹಿಡಿದಿರುವಿರಿ! ತುಂಬಿದ ಗಂಗೆಯ ಒಡಲಲ್ಲಿ ದಾರಿಯನ್ನು ಕೊಡಿಸುವ ಭಗವಂತನು ನಿಮ್ಮ ಧೋತರವು ತೊಯ್ಯದಂತೆ ಮಾಡಲಾರನೇ? ಎಂದಳು ಹಾಲು ಮಾರಿ ಹೊಟ್ಟೆತುಂಬಿಕೊಳ್ಳುವ ನಿನಗೆ ನಾಮಸ್ಮರಣೆಯ ಮಹಿಮೆ ಏನುಗೊತ್ತು! ಭಗವಂತನ ಧ್ಯಾನದಲ್ಲಿಯೇ ಮುಪ್ಪಾದ ನನಗೆ ನೀನು ಉಪದೇಶ ಮಾಡುವಿಯಾ? ಎಂದು ಜಂಬದ ಮಾತಾಡುತ್ತ ಪುರೋಹಿತನು ಮತ್ತೆರಡುಹೆಜ್ಜೆ ಮುಂದೆ ಹೋಗುವಷ್ಟರಲ್ಲಿ ದೊಡ್ಡ ಪ್ರವಾಹದಲ್ಲಿ ಬಿದ್ದು ಮುಳುಗೇಳುತ್ತ ತೇಲಿಹೋದನು. ಗೌಳಿಗಿತ್ತಿಯು ಇದನ್ನು ನೋಡಿ ಹರಿನಾಮಸ್ಮರಣೆ ಮಾಡುತ್ತ ಹಿಡಿಬಂದು ಬ್ರಾಹ್ಮಣನ ಜಂಡಿಕೆಯನ್ನು ಹಿಡಿದು ಎಳೆದು ತಂದು ದಂಡೆಗೆ ಮುಟ್ಟಿಸಿದಳು. ಬ್ರಾಹ್ಮಣನ ಭಕ್ತಿಪರೀಕ್ಷೆ ಯಾದಂತಾಯಿತು

ಸಾಂ || ಹರಿನಾಮ ಸ್ಮರಣೆಯ ಮಹಿಮೆಯ ನಂಬಿರ್ದ | ವರಸಾಧ್ವಿಗೋಪಿ ಗಂಗೆಯಲಿ ||
ಹರುಷದೊಳ್ ನಡೆದಿರಲು ನಿಜಭಕ್ತಿಯನ್ನುಳಿದ | ವರವಿಪ್ರ ಮುಳುಗಿ ಸಾಯುವನು ||

## ೧೫. ಆತ್ಮಜ್ಞಾನಿಯಾದ ವ್ಯಾಸನು.

ಒಂದು ದಿನ ಆತ್ಮಜ್ಞಾನಿಯಾದ ವ್ಯಾಸನು ಯಮುನಾತೀರದಲ್ಲಿ ಸಂಚರಿಸುತ್ತಲಿದ್ದನು. ಆಗ ಅಲ್ಲಿ ಕೆಲವು ಗೋಪಿಯರು ಹಾಲು ಮೊಸರುಗಳ ಗಡಿಗೆಗಳನ್ನು ಬುಟ್ಟಿಯಲ್ಲಿಟ್ಟುಕೊಂಡು ಮಾರಲಿಕ್ಕೆ ಹೋಗುತ್ತಿದ್ದರು. ಅವರಿಗೆ ನದಿಯನ್ನು ದಾಟಬೇಕಾಗಿತ್ತು. ಮಹಾಪೂರದಿಂದ ನದಿಯು ಎರಡೂ ದಂಡೆಗಳಲ್ಲಿ ತುಂಬಿ ಹರಿಯುತ್ತಿದ್ದುದರಿಂದ ಸಣ್ಣಪುಟ್ಟ ಡೋಣಿಗಳು ಓಡಾಡುವಂತಿರಲಿಲ್ಲ. ಆಗ ಅವರು ವ್ಯಾಸಮುನಿಯ ಬಳಿಗೆ ಹೋಗಿ ನದಿಯನ್ನು ದಾಟುವ ಉಪಾಯವನ್ನು ಹೇಳೆಂದು ಕೇಳಿಕೊಂಡರು.

ಗೋಪಿಯರ ಮಾತನ್ನು ಕೇಳಿ ವ್ಯಾಸನು—“ನಿಮ್ಮನ್ನು ನದಿಯನ್ನು ದಾಟಿಸುವ ಭಾರವು ನನಗೆ ಕೂಡಿತು. ಆದರೆ ನಾನು ಈಗ ಹಸಿವೆಯಿಂದ ಕಂಗೆಟ್ಟಿರುವೆನು. ಎರಡು ಮೂರು ದಿನಗಳಿಂದಲೂ ಊಟವೇ ದೊರೆಯಲಿಲ್ಲ. ಆದುದರಿಂದ ನೀವೆಲ್ಲರೂ ಕೂಡಿ ನನ್ನ ಹೊಟ್ಟೆ ತುಂಬುವಷ್ಟು ಹಾಲು ಬೆಣ್ಣೆ ಮೊಸರುಗಳನ್ನು ಕೊಟ್ಟರೆ ನಾನು ನಿಮ್ಮೆಲ್ಲರನ್ನು ನಿರಾಯಾಸವಾಗಿ ನದಿಯನ್ನು ದಾಟಿಸುವೆನು” ಎಂದನು. ಗೋಪಿಯರು ವ್ಯಾಸನ ಮಾತನ್ನು ಸಮ್ಮತಿಸಿದರು. ಅವರು ಬುಟ್ಟಿಯನ್ನಿಳುಹಿ ಅವನಿಗೆ ಸಾಕುಸಾಕೆನ್ನುವಷ್ಟು ಹಾಲುಮೊಸರುಗಳನ್ನೂ ಬೆಣ್ಣೆಯನ್ನೂ ಕೊಟ್ಟರು. ವ್ಯಾಸನು ಅವನ್ನೆಲ್ಲ ತಿಂದು “ಡರ್ರೆಂದು ತೇಗುತ್ತ ನದಿಗೆ ಹೋಗಿ ಕೈಬಾಯಿಗಳನ್ನು ತೊಳೆದುಕೊಂಡು ತಿರುಗಿ ಬರುವಷ್ಟರಲ್ಲಿ ಗೋಪಿಯರು ತಮ್ಮ ತಮ್ಮ ಬುಟ್ಟಿಗಳನ್ನು ಹೊತ್ತುಕೊಂಡು ನದಿಯನ್ನು ದಾಟಲು ಸಿದ್ಧರಾಗಿ ನಿಂತಿದ್ದರು. ವ್ಯಾಸನು ಅವರನ್ನು ನೋಡಿ ನದಿಯ ಕಡೆಗೆ ತಿರುಗಿ “ಭಗವತೀ, ಮಾತೇ ಯಮುನಾ ಇಂದು ನಾನು ಏನೊಂದೂ ಆಹಾರವನ್ನು ತೆಗೆದುಕೊಳ್ಳದೆ ಇದ್ದುದು ನಿಜವಾದರೆ ನನಗೂ ಈ ಗೋಪಿಯರಿಗೂ ನಿನ್ನ ಒಡಲಲ್ಲಿ ದಾರಿಯನ್ನು ಕೊಡು, ಎಂದು ಪ್ರಾರ್ಥಿಸಿದನು.

ವ್ಯಾಸನ ಪ್ರಾರ್ಥನೆಯು ಮುಗಿಯುವದರೊಳಗಾಗಿ ಯಮುನೆಯು ಇಬ್ಭಾಗವಾಗಿ ಒಡೆದು ತನ್ನ ಒಡಲಿನಲ್ಲಿ ದಾರಿಯನ್ನು ಬಿಟ್ಟು ಬಿಟ್ಟಳು. ಗೋಪಿಯರು ಆಶ್ಚರ್ಯವಿಸ್ಮಯಗಳಿಂದ ಬೆಪ್ಪಾಗಿ ನಿಂತರು. ಆಗ ವ್ಯಾಸನು ತಂಗಿ

ಯರಿರಾ. ನಡೆಯಿರಿ ಯಮುನಾ ದೇವಿಯು ನಿಮಗೆ ದಾರಿಯನ್ನು ಬಿಟ್ಟು ನಿಂತಿರುವಳು ಎನ್ನುತ್ತ ಮುಂದೆ ನಡೆದನು. ಗೋಪಿಯರು ಅವನ ಹಿಂದೆ ನಡೆದು ನದಿಯ ಆಚೆಯ ದಂಡೆಯನ್ನು ಸೇರಿದರು.

ವ್ಯಾಸನು ಯಮುನೆಯನ್ನು ಪ್ರಾರ್ಥಿಸುವಾಗ ತಾನು ಈಹೊತ್ತು ಏನೊಂದೂ ಆಹಾರವನ್ನು ತೆಗೆದುಕೊಳ್ಳದೆ ಇದ್ದುದು ನಿಜವಾದರೆ ಎಂದು ನುಡಿದದ್ದು ಗೋಪಿಯರಿಗೆ ತಿಳಿಯಲಿಲ್ಲ. ಇದೇ ಈಗ ಮೂರು ನಾಲ್ಕು ಗಡಿಗೆ ತುಂಬ ಹಾಲು ಮೊಸರು ಬೆಣ್ಣೆಗಳನ್ನು ತಿಂದ ವ್ಯಾಸನು ತಾನು ಏನೂ ತಿನ್ನಲಿಲ್ಲವೆಂನ್ನುವದನ್ನು ಕಂಡು ಅವರು ಆಶ್ಚರ್ಯದಿಂದ ಹೀಗೇಕೆಂದು ಅವನನ್ನು ಕೇಳಿದರು ಆಗ ವ್ಯಾಸನು "ತಂಗಿಯರಿರಾ. ನೀವು ಹಾಲು ಮೊಸರು ಬೆಣ್ಣೆಗಳನ್ನೂ ಗಡಿಗೆಯಲ್ಲಿ ತುಂಬಿ ತಲೆಯ ಮೇಲೆ ಹೊತ್ತುಕೊಂಡಿರುವಂತೆಯೇ ಅವುಗಳನ್ನು ನಾನು ಈ ತೊಗಲಿನ (ಘಟ) ಗಡಿಗೆಯಲ್ಲಿಟ್ಟುಕೊಂಡಿರುವೆನಲ್ಲದೆ ಅವುಗಳನ್ನು ತಿಂದವನಲ್ಲ! ಎಂದು ನುಡಿದು ತನ್ನ ಕೆಲಸಕ್ಕೆ ನಡೆದನು.

ಆತ್ಮಜ್ಞಾನಿಯಾದ ವ್ಯಾಸದೇವನು ಹಾಲು ಬೆಣ್ಣೆ ಮೊಸರುಗಳನು, ತೊಗಲಿನ ಚೀಲದಂತಿರುವ ಒಡಲಿನಲ್ಲಿ ಸುರಿದುಕೊಂಡುದೇನೋ ನಿಜ. ಆದರೆ ಅವನಿಗೆ ಆ ಪದಾರ್ಥಗಳಲ್ಲಿ ಮೋಹಾಸಕ್ತಿಗಳಿರಲಿಲ್ಲ. ಅವು ತನ್ನ ಜೀವನಕ್ಕೆ ಬೇಕೇಬೇಕೆಂಬ ಭಾವನೆಯು ಅವನಲ್ಲಿರಲಿಲ್ಲ. ಆದುದರಿಂದಲೇ ಆತನ ಮಹಿಮೆಗೆ ಮೆಚ್ಚಿದ ಯಮುನೆಯು ತನ್ನ ಒಡಲಿನಲ್ಲಿ ದಾರಿಯನ್ನು ಕೊಡಬೇಕಾಯಿತು.

ಸಾಂ|| ಪಾಲ್ಬೆಣ್ಣೆ ಮೊಸರುಗಳ ನೊಡಲೊಳಿಕ್ಕಿದ ಜ್ಞಾನಿ ।
ಪಾಲ್ಬೆಣ್ಣೆ ಮೊಸರುಣ್ಣದಂತೆ ||
ಪಾಲ್ಬೆಣ್ಣೆಯುಂದದೊಳ್ ಜಗವನ್ನೆ ವ್ಯಾಪಿಸಿದ ।
ಪಾಲ್ಬೆಣ್ಣೆಗಳ್ಳನೊಳ್ ಬೆರೆಯ್ವೆ || ೧ ||

---

## ೧೬ ಭಕ್ತಾಭಿಮಾನಿಯಾದ ಭಗವಂತನು.

ಒಂದು ಊರಲ್ಲಿ ಒಂದು ಶಿವಾಲಯವಿದ್ದಿತು. ಊರ ಪುರೋಹಿತನು ಆ ಶಿವಾಲಯದ ಅರ್ಚಕನು. ತ್ರಿಕಾಲದಲ್ಲಿಯೂ ಶಿವ ಪೂಜೆ ಮಾಡಬೇಕೆಂದು ಊರವರು ಕೆಲವು ಭೂಮಿಯನ್ನು ಪುರೋಹಿತನಿಗೆ ಉಂಬಳಿ ಕೊಟ್ಟಿದ್ದರು.

ಬ್ರಾಹ್ಮಣನು ತುಂಬಾ ಭಕ್ತಿವಂತನು. ಅವನಿಗೆ ಹತ್ತು ವರ್ಷದ ಒಬ್ಬನೇ ಮಗನಿದ್ದನು.

ಒಂದು ದಿನ ಅದೇನೋ ಕೆಲಸಕ್ಕೆಂದು ಪುರೋಹಿತನು ನೆರೆಯೂರಿಗೆ ಹೋಗಿದ್ದನು. ಹೋಗುವಾಗ ತನಗೆ ಸಾಯಂಕಾಲದ ಒಳಗಾಗಿ ತಿರುಗಿ ಬರುವುದಾಗದಿದ್ದರೆ ಶಿವಾಲಯದ ರಾತ್ರಿಯ ಪೂಜೆಗೆ ಮಗನನ್ನು ಕಳುಹಬೇಕೆಂದೂ ದೇವರ ನೈವೇದ್ಯಕ್ಕೆ ಹಣ್ಣು ಹಾಲುಗಳನ್ನು ಕೊಟ್ಟು ಕಳುಹೆಂದೂ ಹೆಂಡತಿಗೆ ಹೇಳಿ ಹೋಗಿದ್ದನು.

ಪ್ರದೋಷ ಕಾಲವು ಮೀರಿ ಸಾಯಂಕಾಲವಾದೊಡನೆಯೇ ಪುರೋಹಿತನ ಹೆಂಡತಿಯು ಮಗನನ್ನು ಕರೆದು, ಬೇಗನೆ ಶಿವಾಲಯಕ್ಕೆ ಹೋಗಿ ಸಾಯಂಕಾಲದ ಪೂಜೆಯನ್ನು ಮುಗಿಸಿ ಬಾರೆಂದು ಒಂದು ಹರಿವಾಣದಲ್ಲಿ ಕೆಲವು ಹಣ್ಣುಗಳನ್ನೂ ಥಾಲಿಯಲ್ಲಿ ಹಾಲನ್ನೂ ಪೂಜೋಪಕರಣಗಳನ್ನೂ ಸಿದ್ಧಮಾಡಿ ಕೊಟ್ಟು ಕಳುಹಿದಳು. ಬಾಲಕನು ತಾಯಿಯು ಕೊಟ್ಟ ಪೂಜೋಪಕರಣಗಳನ್ನೂ ದೀಪವನ್ನೂ ತೆಗೆದುಕೊಂಡು ಶಿವಾಲಯಕ್ಕೆ ನಡೆದನು.

ಪುರೋಹಿತನ ಮಗನು ಶಿವಾಲಯಕ್ಕೆ ಹೋಗಿ ತನಗೆ ತಿಳಿದಂತೆ ಪೂಜೆಯನ್ನು ಮಾಡಿ ದೀಪ ಧೂಪಗಳನ್ನೆಲ್ಲ ಅರ್ಪಿಸಿದ ಬಳಿಕ ಶಿವನ ಪ್ರತಿಮೆಯ ಇದಿರಿಗೆ ತಾನು ತಂದಿದ್ದ ನೈವೇದ್ಯವನ್ನಿಟ್ಟು ಸಾಷ್ಟಾಂಗ ನಮಸ್ಕಾರ ಮಾಡಿದನು.

ಬಾಲಕನು ಶಿವನ ಪ್ರತಿಮೆಯು ನೈವೇದ್ಯವನ್ನು ಪ್ರತ್ಯಕ್ಷವಾಗಿ ಸ್ವೀಕರಿಸುವದೆಂದು ನಂಬಿದ್ದನು. ಅವನು ಕೈಮುಗಿದುಕೊಂಡು ದಯಾನಿಧೇ, ಪರಮೇಶ್ವರಾ ನೈವೇದ್ಯವನ್ನು ಸ್ವೀಕರಿಸು, ಎಂದು ಪ್ರಾರ್ಥಿಸಿದನು.

ಎರಡು ಗಳಿಗೆಯವರೆಗೂ ಶಿವನ ಮೂರ್ತಿಯು ನೈವೇದ್ಯವನ್ನು ಸ್ವೀಕರಿಸಲಿಲ್ಲ. ಬಾಲಕನಿಗೆ ಸಂಶಯವುಂಟಾಯಿತು. ತಾನು ತಂದೆಯಂತೆ ಮಂತ್ರಗಳನ್ನು ಅನ್ನದೆ ಇದ್ದುದರಿಂದಲೋ ತನ್ನ ಪೂಜಾ ವಿಧಾನದಲ್ಲಿ ಇನ್ನಾವ ಕೊರತೆಯುಂಟಾದುದರಿಂದಲೋ ಈಶ್ವರನು ಕೋಪಗೊಂಡು ತಾನಿಟ್ಟ ನೈವೇದ್ಯವನ್ನು ಸ್ವೀಕರಿಸದೆ ಇರುವನೆಂದು ಅವನು ಭಾವಿಸಿಕೊಂಡನು.

ಆಗ ಅವನು ಪುನಃ ಹೇ, ದಯಾನಿಧೇ, ಶಂಕರಾ ನಾನು ಇನ್ನೂ ಮಂತ್ರ ತಂತ್ರಗಳನ್ನು ಕಲಿಯಲಿಲ್ಲ. ತಂದೆ ಮನೆಯಲ್ಲಿಲ್ಲವಾದುದರಿಂದ ನಾನೇ ಪೂಜೆಗೆ ಬರಬೇಕಾಯಿತು. ನನ್ನ ಸರ್ವಾಪರಾಧಗಳನ್ನೂ ಕ್ಷಮಿಸಿ ನೈವೇದ್ಯವನ್ನು ಸ್ವೀಕ

ರಿಸು. ರಾತ್ರಿಯು ಹೆಚ್ಚುತ್ತ ನಡೆದಿದೆ. ಹೆಚ್ಚು ರಾತ್ರಿಯಾದರೆ ಕತ್ತಲೆಯಲ್ಲಿ ನಾನೊಬ್ಬನೇ ಮನೆಗೆ ಹೋಗಲಾರೆನು. ಮೇಲಾಗಿ ಅಮ್ಮನು ಇಷ್ಟೇಕೆ ತಡಮಾಡಿದೆಯೆಂದು ಬೈಯುವಳು. ದಯಮಾಡಿ ಬೇಗನೆ ನೈವೇದ್ಯವನ್ನು ಸ್ವೀಕರಿಸು. ಎಂದು ಮತ್ತೊಮ್ಮೆ ನಮಸ್ಕಾರ ಮಾಡಿದನು. ಆದರೂ ಶಿವನ ಮೂರ್ತಿಯು ಮಾತಾಡಲಿಲ್ಲ; ಹಾಲು ಹಣ್ಣುಗಳನ್ನು ಸ್ವೀಕರಿಸಲಿಲ್ಲ. ಬಾಲಕನು ಅಂಜಿ ಅಳತೊಡಗಿದನು. ಹೇ, ತಂದೇ, ಜಗದೀಶ್ವರಾ, ಯಾವ ಅಪರಾಧವಿದ್ದರೂ ಕ್ಷಮಿಸಿ ನೈವೇದ್ಯವನ್ನು ಸ್ವೀಕರಿಸೆಂದು ಮತ್ತೊಮ್ಮೆ ಬೇಡಿಕೊಂಡನು.

ಬಾಲಕನ ವಿಶುದ್ಧವಾದ ಭಕ್ತಿಭಾವವನ್ನು ಕಂಡು ಭಕ್ತವತ್ಸಲನಾದ ಭಗವಂತನು ಬೇರೆ ದಾರಿ ತೋರದೆ ಶಿವನ ಪ್ರತಿಮೆಯಲ್ಲಿ ಪ್ರಕಟವಾಗಿ ನೈವೇದ್ಯವನ್ನು ಸ್ವೀಕರಿಸಿದನು. ಶಿವನಮೂರ್ತಿಯು ನೈವೇದ್ಯವನ್ನು ಸ್ವೀಕರಿಸುವದನ್ನು ನೋಡಿ ಬಾಲಕನಿಗೆ ಪರಮಾನಂದವಾಯಿತು. ಅವನು ಸಂತೋಷದಿಂದ ಮನೆಗೆ ಬಂದು ನಡೆದ ಸಂಗತಿಯನ್ನೆಲ್ಲ ತಾಯಿಗೆ ಅರುಹಿದನು. ಇದೀಗ ಭಗವಂತನ ಭಕ್ತವತ್ಸಲತೆ.

ಸಾಂ ॥ ಭಕ್ತರಭಿಮಾನಿ ಶ್ರೀಹರಿ ತನ್ನ ಪೂಜಿಸುವ ।
ಭಕ್ತರಾಪತ್ತಿನಲ್ಲಿರಲು ॥
ಭಕ್ತಿಭಾವನೆಯಿಂದ ಮೊರೆಪೊಕ್ಕು ಕರೆಯೆ ಸು ।
ವ್ಯಕ್ತರೂಪವ ಧರಿಸುವನು ॥ ೧ ॥

---

## ೧೭. ಅಂಗಡಿಕಾರನ ಕಪಟ ತಂತ್ರ.

ಒಂದು ಊರಲ್ಲಿ ಒಬ್ಬ ಅಂಗಡಿಕಾರನಿದ್ದನು. ನೋಡುವವರಿಗೆ ಅವನಂಥ ದೇವಭಕ್ತನು ಬೇರೊಬ್ಬನಿಲ್ಲವೆಂಬಂತೆ ತೋರುವನು. ಬಾಯಿಯಲ್ಲಿ ಸರ್ವದಾ ಹರಿನಾಮಸ್ಮರಣೆ. ಕೊರಳಲ್ಲಿ ತರತರದ ಜಪಮಾಲೆಗಳು. ಹಣೆಯಲ್ಲಿ ನಿಚ್ಚಳವಾಗಿ ತೋರುತ್ತಿರುವ ಅಂಗಾರ ಅಕ್ಷತೆಗಳು. ಯಾವಾಗಲೂ ಅಂಗಡಿಯ ಒಳಗೆ ಕುಳಿತು ಹರಿನಾಮಸ್ಮರಣೆ ಮಾಡುತ್ತಿರುವನು.

ಅಂಗಡಿಕಾರನ ಈ ತರದ ನಡತೆಯನ್ನು ನೋಡಿ ಊರವರು ಇವನು ಒಳ್ಳೇ ಧಾರ್ಮಿಕನೂ ಸತ್ಯವಂತನಾದ ವ್ಯಾಪಾರಿಯೂ ಎಂದು ತಿಳಿದಿದ್ದರು. ಅವರಿಗೆ ಏನು ಸಾಮಾನು ಬೇಕಿದ್ದರೂ ನೆಟ್ಟಗೆ ಇವನ ಅಂಗಡಿಗೆ ಬರುವರು.

ಅಂಗಡಿಗೆ ಗಿರಾಕಿಗಳು ಬಂದ ಸುಳಿವು ತಿಳಿದೊಡನೆ ಒಳಗೆ ಕುಳಿತ ಯಜಮಾನನು ಕೇಶವ, ಕೇಶವ, ಎನ್ನುವನು. ಕೂಡಲೆ ಹೊರಗೆ ಕೆಲಸ ಮಾಡುವವನೊಬ್ಬನು ಗೋಪಾಲ, ಗೋಪಾಲ, ಎನ್ನುವನು. ಅವನ ಸಂಗಡಲೇ ಮತ್ತೊಬ್ಬನು "ಹರಿ, ಹರಿ" ಎನ್ನುವನು. ಈ ಮಾತುಗಳನ್ನು ಕೇಳಿದೊಡನೆ ಒಳಗಿನವನು ಪುನ: ಹರ ಹರ ಮಹಾದೇವ ಎಂದು ಬಿಡುವನು.

ಇಷ್ಟಾದ ಬಳಿಕ ಗಿರಾಕಿಯು ಬೇಡಿದ ಸಾಮಾನುಗಳನ್ನು ಕೊಟ್ಟು ಕಳುಹಿಸುವರು. ಗಿರಾಕಿಗಳು ಅಂಗಡಿಯೊಳಗಿನ ಆಳುಮಕ್ಕಳ ಮತ್ತು ಯಜಮಾನನ ದೇವಭಕ್ತಿಯನ್ನು ನೋಡಿ ತುಂಬಾ ಸಂತೋಷಪಟ್ಟು ಅವರು ಹೇಳುವ ಧಾರಣೆಯಿಂದ ಸಾಮಾನುಗಳನ್ನು ಒಯ್ಯುವರು. ಅಳತೆ ತೂಕಗಳನ್ನೂ ಹೆಚ್ಚು ಎಚ್ಚರಿಕೆಯಿಂದ ನೋಡುತ್ತಿರಲಿಲ್ಲ.

ಆ ಅಂಗಡಿಯೊಳಗಿನ ನಿಜವಾದ ಸಂಗತಿಯು ಮಾತ್ರ ಈ ಹೊರಗಿನ ತೋರಿಕೆಯಿಂದ ತೀರ ಭಿನ್ನವಾಗಿತ್ತು. ಯಜಮಾನನು "ಕೇಶವ, ಕೇಶವ" ಎಂದರೆ ಬಂದವನು ಯಾರೆಂದು ಕೇಳಲು ಅದಕ್ಕೆ ಸೇವಕನು ಗೋಪಾಲ, ಎಂದರೆ ದನಕಾಯುವ ಒಕ್ಕಲಿಗನೆಂದು ಉತ್ತರ ಹೇಳುತ್ತಿದ್ದನು. ಮತ್ತೊಬ್ಬನು ಹರಿ, ಹರಿ ಎಂದರೆ ಅವನನ್ನು ಮೋಸಗೊಳಿಸಬಹುದೇ ಎಂದು ಪ್ರಶ್ನೆ ಮಾಡಲು ಯಜಮಾನನು ಹರ ಹರ, ಎಂದು ಅಪ್ಪಣೆ ಕೊಡುತ್ತಿದ್ದನು. ಆ ಬಳಿಕ ಆಳುಗಳು ಬೆಲೆಯನ್ನು ಒಂದಕ್ಕೆ ಎರಡಾಗಿ ಹೇಳಿಯೋ ಇನ್ನಾವ ರೀತಿಯಿಂದಲೋ ಮೋಸ ಮಾಡಿ ಕಳುಹಿಸುತ್ತಿದ್ದರು.

ಸಾ ॥ ಹೊರಗಿನಾಡಂಬರದ ನಡೆನುಡಿಗಳಿಂದಲೆ ।  
ವರಭಕ್ತನೆಂದು ನಂಬದಿರು ॥  
ಪರಮಾತ್ಮನಲಿ ಲೀನಭಾವದಲಿ ಬೆರೆದಿರುವ ।  
ಗುರುಪುಂಗವನ ಸೇವಿಸುವುದು ॥

## ೧೮. ಲಕ್ಷ್ಮೀನಾರಾಯಣರು.

ಶೇಷಶಾಯಿಯಾದ ಶ್ರೀಮನ್ನಾರಾಯಣನು ಕ್ಷೀರಸಾಗರದಲ್ಲಿ ಸುಖ ಸಲ್ಲಾಪಗಳಲ್ಲಿ ಕುಳಿತಿರಲು ಲಕ್ಷ್ಮೀದೇವಿಯು ಆತನ ಪಾದಸೇವೆಯನ್ನು ಮಾಡುತ್ತಲಿದ್ದಳು. ಭಗವಂತನು ಒಮ್ಮಿಂದೊಮ್ಮೆ ಎದ್ದು ಕಾರ್ಯಾವಸರಕ್ಕೆ ಹೊರಡುತ್ತಿರುವದನ್ನು ನೋಡಿ ದೇವಿಯು ಇಷ್ಟೇಕೆ ಅವಸರವೆಂದು ಕೇಳಿದಳು. ಆಗ ಭಗವಂತನು " ದೇವೀ ಭೂಲೋಕದಲ್ಲಿ ನನ್ನ ಪರಮಭಕ್ತನೊಬ್ಬನು ಮಹಾವಿಪತ್ತಿನಲ್ಲಿರುವನು. ಆತನ ಸಂರಕ್ಷಣಕ್ಕಾಗಿ ಹೊರಟಿರುವೆನು " ಎಂದು ನಡೆದನು.

ಮತ್ತೊಂದು ಕ್ಷಣದಲ್ಲಿಯೇ ಭಗವಂತನು ತಿರುಗಿ ಬಂದುದನ್ನು ನೋಡಿ ಲಕ್ಷ್ಮೀದೇವಿಯು ಇದೇನು? ಇಷ್ಟು ಬೇಗನೆ ತಿರುಗಿ ಬಂದಿರಿ? ಭೂಲೋಕಕ್ಕೆ ಹೋಗಿ ಭಕ್ತನನ್ನು ವಿಪತ್ತಿನಿಂದ ಉದ್ಧಾರ ಮಾಡುವ ವಿಚಾರವನ್ನು ನಿಲ್ಲಿಸಿಬಿಟ್ಟಂತೆ ತೋರುತ್ತದೆ " ಎಂದಳು. ದೇವಿಯ ಮಾತಿಗೆ ಭಗವಂತನು ಮುಗುಳು ನಗೆಯಿಂದ—" ನನ್ನ ಭಕ್ತಾಗ್ರಣಿಯೊಬ್ಬನು ಭಗವದ್ಧ್ಯಾನದಲ್ಲಿ ಆಸಕ್ತನಾಗಿ ನಡೆದಿರಲು ದಾರಿಯಲ್ಲಿ ಅಗಸ (ಮಡಿವಳ) ನು ತೊಳೆದು ಒಣಗಿಸಿದ ಅರಿವೆಯನ್ನು ನೋಡದೆ ತುಳಿಯುತ್ತ ನಡೆದಿದ್ದನು. ಆ ಅಗಸನು ಇದನ್ನು ನೋಡಿ ದೊಡ್ಡ ಬಡಿಗೆಯನ್ನು ತಕ್ಕೊಂಡು ಆತನನ್ನು ಹೊಡೆಯಲು ಹೊರಟ ಕೂಡಲೆ ನಾನು ಅವನ ಉದ್ಧಾರಕ್ಕೆಂದು ಹೊರಡಬೇಕಾಗಿತ್ತು. ನಾನು ನಾಲ್ಕು ಹೆಜ್ಜೆ ಹೋಗುವದರೊಳಗಾಗಿ ಆ ಭಕ್ತನು ತನ್ನನ್ನು ಹೊಡೆಯಲು ಬಂದ ಅಗಸನನ್ನು ತಿರುಗಿ ಹೊಡೆಯಲು ಕೈಯೆತ್ತಿದ್ದು ತಿಳಿಯಿತು. ಕೂಡಲೆ ನಾನು ತಿರುಗಿ ಬಂದು ಬಿಟ್ಟೆನ ತನ್ನ ರಕ್ಷಣೆಯನ್ನು ತಾನೇ ಮಾಡಿಕೊಳ್ಳುವೆನೆಂಬ ಭಾವನೆಯು ಆತನಲ್ಲಿ ಹುಟ್ಟಿದೊಡನೆಯೇ ಆತನನ್ನು ರಕ್ಷಿಸುವ ನನ್ನ ಮೇಲಿನ ಭಾರವು ಇಲ್ಲದಂತಾಯಿತಲ್ಲವೇ!

ಲೋಕದಲ್ಲಿ ಯಾವಾತನು ಭಗವಂತನನ್ನೇ ಅವಲಂಬಿಸಿರುವನೋ ಸಂಪತ್ತಿನಲ್ಲಿಯೂ ವಿಪತ್ತಿನಲ್ಲಿಯೂ ಆತನೇ ಗತಿಯೆಂದು ನಂಬಿ ನಡೆಯುವವನೋ ಆತನನ್ನು ಮಾತ್ರ ಭಗವಂತನು ಸಕಲ ವಿಪತ್ತುಗಳಿಂದಲೂ ಉದ್ಧಾರ ಮಾಡುವದರಲ್ಲಿ ಸಂಶಯವಿಲ್ಲ.

ಸಾ|| ಹರಿಯೆ ರಕ್ಷಕನೆಮಗೆ ಹರಿಯೆ ಶಿಕ್ಷಕನೆಮಗೆ । ಹರಿಯೆ ನಮಗಾಧಾರವೆಂಬ ||
ಹರಿಭಕ್ತರಿಗೆ ಬಂದ ಕಷ್ಟ ತಾಪತ್ರಯವ । ಹರಿಯೆ ಪರಿಹರಿಸಿ ಪೊರೆಯುವನು ||

## ೧೯ ಮುಕ್ತಿಗೆ ಭಕ್ತಿಯೇ ಕಾರಣವು.

ಪುಣ್ಯನದಿ ಗಂಗೆಯು ಹಿಮಾಚಲದ ನಿರ್ಜನವಾದ ಗಿರಿಕಂದರದಲ್ಲಿ ಉದಯವಾಗಿರುವದು. ಈ ಮಲೆನಾಡಿನ ಸಣ್ಣ ಸರುವೇ ಮುಂದೆ ಬೆಳೆಬೆಳೆದು ಮಹಾನದಿಯಾಗಿ ತನ್ನ ಶಾಖೋಪಶಾಖೆಗಳಿಂದ ಉತ್ತರ ಹಿಂದುಸ್ತಾನದ, ವಿಸ್ತಾರವಾದ ದೇಶಕ್ಕೆ ಅಪಾರ ಸಂಪತ್ತನ್ನೀಯುವ ಬೈಲು ಭೂಮಿಯನ್ನುಂಟುಮಾಡಿ, ಅದಕ್ಕೆ ಕಾಲಕಾಲಕ್ಕೆ ನೀರುಣಿಸಿ ಕೋಟ್ಯನುಕೋಟಿ ಪ್ರಜೆಗಳನ್ನು ಸಂರಕ್ಷಿಸುವದು. ಅದರ ಈ ಬಗೆಯ ಮಹದುಪಕಾರಕ್ಕಾಗಿಯೇ ಹಿಂದೂ ಆರ್ಯರು ಆ ನದಿಗೆ ಅಷ್ಟೊಂದು ಮಹತ್ವವನ್ನು ಕೊಟ್ಟರೆಂತಲೂ ಅದರಿಂದಾಗುವ ಲೋಕೋಪಕಾರಕ್ಕಾಗಿಯೇ ಅವರು ತಮ್ಮ ಕೃತಜ್ಞತಾಭಾವವನ್ನು ತೋರ್ಪಡಿಸಿ ಅದಕ್ಕೆ ದೈವತ್ವವನ್ನು ಕಲ್ಪಿಸಿದರೆಂತಲೂ, ಅದರ ಜಲದಲ್ಲಿ ಅಮೋಘವಾದ ಪುಣ್ಯದಾಯಕವೂ ಅತಏವ ಮೋಕ್ಷದಾಯಕವೂ ಅಖಿಲಪಾಪವಿನಾಶಕವೂ ಆದ ಮಹಾಮಹಿಮೆಯಿರುವದೆಂದು ಜಗತ್ತಿಗೆಲ್ಲ ಸಾರಿದರೆಂತಲೂ ಬಹುಜನ ಪಂಡಿತರು ತರ್ಕಿಸುವರು. ಏನೇ ಇದ್ದರೂ ಆ ಭಾಗಿರಥಿಯ ಜಲವು ಹಿಂದುಗಳಿಗೆ ಪವಿತ್ರವಾದದ್ದೇ ಸರಿ; ಭಕ್ತಿಯುತರಾದ ಭಾವಿಕ ಭಕ್ತವೃಂದಕ್ಕೆ ಮೋಕ್ಷದಾಯಕವೇ ಸರಿ!

ಈ ಭಾಗೀರಥೀ ನದಿಯ ತೀರದಲ್ಲಿ ಹಲವು ಮಹಾ ಕ್ಷೇತ್ರಗಳಿರುವುವು. ಪ್ರಯಾಗ ( ಅಲಹಾಬಾದ ) ಕ್ಷೇತ್ರದ ತ್ರಿವೇಣೀ ಸಂಗಮ ಸ್ಥಾನವೂ ಶ್ರೀ ವಿಶ್ವನಾಥನ ಆವಾಸವಾದ ಕಾಶೀ ಕ್ಷೇತ್ರವೂ ಅವುಗಳ ಹೆಸರುಗಳನ್ನು ಕೇಳಿದ ಮಾತ್ರಕ್ಕೆ ಹಿಂದೂ ಆಬಾಲವೃದ್ಧರ ಅಂತರಂಗದಲ್ಲಿ ಅಗಮ್ಯವಾದೊಂದು ಮಹಾಪೂಜ್ಯ ಭಾವನೆಯನ್ನು ಉಂಟು ಮಾಡುವುವು. ಇದಕ್ಕೇನು ಕಾರಣವೋ ನಾವು ಒಡೆದು ಹೇಳಲಾರೆವು. ಆಸೇತು ಹಿಮಾಚಲ ಪರ್ಯಂತ ವ್ಯಾಪಿಸಿರುವ ಭರತಖಂಡದ ಯಾವತ್ತೂ ಹಿಂದೂ ಪ್ರಜೆಗಳ ಸಾತ್ವಿಕ ಅಂತರಂಗದಲ್ಲಿ ಆ ಪೂಜ್ಯ ನದಿಯ ಜಲದ ( ಭಾಗೀರಥಿಯ ತೀರ್ಥದ, ) ಆ ಕಾಶೀ ಕ್ಷೇತ್ರದ ನಾಮಸ್ಮರಣಮಾತ್ರದಿಂದ ಉಂಟಾಗುವ ಭಕ್ತಿ ಪ್ರವಾಹಕ್ಕೆ ಯಾವತರದ ಅಂತಃಪ್ರೇರಣೆಯಿರಬಹುದೆಂಬುದನ್ನು ಭೌತಿಕ ಶಾಸ್ತ್ರಗಳಲ್ಲಿಯೂ, ಜಗಚ್ಚಾಲಕನಾದ ಭಗವಂತನ

ಮುಂದೆ ಕೇವಲ ಕ್ರಿಮಿ ಸ್ವರೂಪನಾಗಿರುವ ಮೂಢ ಮಾನವನ ಶಕ್ತಿಯಲ್ಲಿಯೂ ಅತುಲವಾದ ಶ್ರದ್ಧೆಯನ್ನಿಡುವ ಆಧುನಿಕ ಪಾಶ್ಚಾತ್ಯ ಸರಸ್ವತಿಯ ಪೋಷ್ಯಪುತ್ರರಾದ ಸಮಾಜ-ಸುಧಾರಣಾದಿಗಳಾದ ನಮ್ಮ ಹಿಂದೂ ಬಾಂಧವರು ಎಷ್ಟು ಮಾತ್ರವೂ ಅರಿಯಲಾರರು; ಇರಲಿ.

ಶಿಶಿರ ಋತುವಿನ ಆರಂಭದ ದಿವಸವದು. ಅಂದೇ ಅದೇನೋ ಒಂದು ಮಹಾ ಪರ್ವಕಾಲವೂ ಒದಗಿ ಬಂದಿತ್ತು. ಅದಕ್ಕಾಗಿ ಅಂದು ಪ್ರಾತಃಕಾಲದಲ್ಲಿ ವಾರಣಾಸಿಯ ಗಂಗಾ ನದಿಯ ಐವತ್ತೆರಡು ಘಟ್ಟಗಳ ಮೇಲೆ ಇನ್ನೂ ಸೂರ್ಯೋದಯಕ್ಕೆ ಎರಡು ಗಳಿಗೆ ಅವಕಾಶವಿರುವಾಗಲೆ ಜನರು ತಂಡತಂಡವಾಗಿ ನೆರೆಯುತ್ತಿದ್ದರು. ನದಿಯ ನೀಲ-ಜಲದ ಮೇಲೆಯೂ ಮುಂದಿನ ದಂಡೆಯಲ್ಲಿಯ ಹಸರು ಬೆಳಸುಗಳ ಮೇಲೆಯೂ ಮಂಜು ದಟ್ಟಾಗಿ ಮುಸುಕಿಕೊಂಡಿತ್ತು. ಉತ್ತರ ಹಿಂದುಸ್ಥಾನದ ಶಿಶಿರ ಋತುವಿನ ಚಳಿಯನ್ನು ಯಥಾರೀತಿಯಾಗಿ ವರ್ಣಿಸುವದೆಂತು ? ಅದರಲ್ಲಿಯೂ ಒಮ್ಮೊಮ್ಮೆ ಹಿಮಾಲಯದ ಕಡೆಯಿಂದ ಒಂದು ತಂಗಾಳಿಯು ಬೆಳಕು ಬಿಟ್ಟಿತೆಂದರೆ ಕೆಲಕೆಲವು ಕಡೆಗಳಲ್ಲಿ ನೀರು ಹೆಪ್ಪುಗಟ್ಟುವದೂ ಉಂಟು. ಇಂತಹ ಚಳಿಯಲ್ಲಿ ಕೆಲವರು "ಕಟಕಟನೆ" ಹಲ್ಲುಗಳನ್ನು ಕಟಕರಿಸುತ್ತ "ಬುಸ್ ಬುಸ್" ಎಂದು ನಿಶ್ವಾಸವಿಡುತ್ತ ಅಪ್ಪುಗೈಯಿಕ್ಕಿಕೊಂಡು ಶರೀರದೊಳಗಿನ ಸ್ನಾಯುಗಳೆಲ್ಲ ಆಕುಂಚಿತವಾಗಿ ಹೋಗಿರುವವೋ ಎಂಬಷ್ಟು ಮೈಯನ್ನು ಉಡುಗಿಸಿ ಮುದ್ದೆ ಮಾಡಿಕೊಂಡು ಗಂಗಾ ನದಿಗೆ ಬರುವರು. ಕೆಲವರು ಜಗನ್ನಾಥ ಪಂಡಿತನ ಗಂಗಾಲಹರಿಯನ್ನು ಉಚ್ಚ ಸ್ವರದಿಂದ ಹಾಡುತ್ತ ಒಂದೊಂದು ಶ್ಲೋಕಕ್ಕೆ ಒಂದೊಂದು ಬಾರಿಯಂತೆ ನದಿಯಲ್ಲಿ ಮುಳುಗೇಳುತ್ತಿದ್ದರು. ಕೆಲವು ಘಟ್ಟಗಳ ಮುಂಭಾಗದಲ್ಲಿ ನದಿಯ ನೀರಿನಲ್ಲಿ ಕಂಬಗಳನು ಹುಗಿದು ಮಾಡಿದ ಕಪ್ಪಿಗೆಯ ಕಟ್ಟೆಗಳ ಮೇಲೆ ಕುಳಿತುಕೊಂಡು ಸಂಧ್ಯಾವಂದನೆಯನ್ನು ಆರಂಭಿಸಿ ಬೊಗಸೆಯಲ್ಲಿ ನೀರಿಟ್ಟುಕೊಂಡು ಅರ್ಘ್ಯವನ್ನು ಕೊಡುವುದಕ್ಕಾಗಿ ಸೂರ್ಯ ನಾರಾಯಣನ ಆಗಮನವನ್ನು ನಿರೀಕ್ಷಿಸುತ್ತ ಉದಯಾಚಲದ ಕಡೆಗೆ ಅನಿಮಿಷನೇತ್ರದಿಂದ ನೋಡುತ್ತಿದ್ದರು. ಗಂಗಾ ನದಿಯ ಘಟ್ಟಗಳಲ್ಲಿ ಎಲ್ಲಿ ನೋಡಿದರೂ ಮಹಾ ಜನ ಸಮ್ಮರ್ದವೇ ಕಾಣಿಸುತ್ತಿತ್ತು.

ಇಂತಿರುವಾಗ ಆಕಾಶ-ಪಥದಲ್ಲಿ ಕೈಲಾಸವಾಸಿಯಾದ ಪರಮೇಶ್ವರನು ಪತ್ನಿ ಪಾರ್ವತೀ ದೇವಿಯೊಂದಿಗೆ ಅದೇನೋ ಕಾರ್ಯ ನಿಮಿತ್ತವಾಗಿ ವಿಮಾನಾ

ರೂಢನಾಗಿ ಸಂಚರಿಸುತ್ತ ಕಾಶೀ ಕ್ಷೇತ್ರದ ಬಳಿಯಲ್ಲಿ ಬಂದನು. ಆಗ ಪಾರ್ವತೀ ದೇವಿಯು ಒಮ್ಮಿಂದೊಮ್ಮೆ- "ಜಗದೊಡೆಯನೇ, ನೀನು ಅತಿನಿಷ್ಕರುಣಿಯೆಂಬಂತೆ ತೋರುತ್ತದೆ. ನೋಡಿದೆಯಾ ಆ ನಿನ್ನ ಭಕ್ತವೃಂದವನ್ನು! ಇಂತಹ ಅಪರಿಮಿತವಾದ ಚಳಿಯಲ್ಲಿ ನಡುಗುತ್ತ ಜೀವದ ಪರಿವೆಯು ಕೂಡ ಇಲ್ಲದೆ ಮುಟ್ಟಿದರೆ ಮೆಟ್ಟಿಬೀಳುವಷ್ಟು ತಣ್ಣಗಾಗಿರುವ ಗಂಗಾ ನದಿಯ ಜಲದಲ್ಲಿ ಒಂದೇ ಸಮನೆ ಮುಳುಗೇಳುತ್ತಲಿದ್ದಾರೆ; ಧ್ಯಾನಮಾಡುತ್ತಲಿದ್ದಾರೆ. ನೀನೊಂದು ದಿನ 'ಪವಿತ್ರವಾದ ಗಂಗಾನದಿಯ ನಾಮಸ್ಮರಣ-ಮಾತ್ರದಿಂದ ಸಕಲ ಪಾಪಗಳೂ ಪರಿಹಾರವಾಗಿ ಮನುಷ್ಯರು ಸಕಲೇಷ್ಟಾರ್ಥಗಳನ್ನೂ ಪಡೆಯುವರೆಂದು ಹೇಳಿರುವೆಯಷ್ಟೇ! ಹಾಗಿದ್ದರೆ ಈ ಜನರಿಗೆ ಈ ಪರಿಯಾದ ದುರವಸ್ಥೆಯೇಕೆ? ನೋಡಿದೆಯಾ, ಕೆಲವರಿಗೆ ಹೊತ್ತುಕೊಳ್ಳುವದಕ್ಕೆ ಅರಿವೆಯೇ ಇಲ್ಲ; ಕೆಲವರು ಉಟ್ಟಿದ್ದ ಬಟ್ಟೆಗೆ ಹತ್ತೆಂಟು ಛಿದ್ರಗಳು; ಕೆಲವರಿಗೆ ಪುಣ್ಯಾತ್ಮರಾದವರು ಈ ಕ್ಷೇತ್ರದಲ್ಲಿ ಇಟ್ಟಿರುವ ಅನ್ನಛತ್ರವೇ ಆಶ್ರಯಸ್ಥಳವು; ಕೆಲವರಿಗೆ ಮಕ್ಕಳಿಲ್ಲ; ಕೆಲವರು ವಿಧವೆಯರು; ಕೆಲವರು ವಿಧುರರು; ಕೆಲವರು ಮಹಾ ರೋಗಪೀಡಿತರು' ಇವರೆಲ್ಲರೂ ಈ ಗಂಗಾ ನದಿಯಲ್ಲಿ ಅನೇಕಬಾರಿ ಸ್ನಾನ ಮಾಡಿ ಇಲ್ಲಿಯ ವಿಶ್ವೇಶ್ವರನ ಮಂದಿರದಲ್ಲಿರುವ ನಿನ್ನ ಮೂರ್ತಿಯ ದರ್ಶನವನ್ನು ತೆಗೆದುಕೊಂಡಿರುವರಷ್ಟೇ!" ಎಂದು ಮುಂತಾಗಿ ಭಕ್ತವೃಂದದ ವಿಷಯವಾಗಿ ವಾತ್ಸಲ್ಯವನ್ನೂ ಅವರನ್ನು ತಿರಸ್ಕರಿಸಿಬಿಟ್ಟಿದ್ದಕ್ಕಾಗಿ ಪತಿಯಮೇಲೆ ತುಸು ಕೋಪವನ್ನೂ ವ್ಯಕ್ತಪಡಿಸುತ್ತ ನುಡಿದಳು.

ಇದನ್ನು ನೋಡಿ ಪರಮೇಶ್ವರನು ಗಹಗಹಿಸಿ ನಕ್ಕು- "ಭಕ್ತವತ್ಸಲಳೇ, ನೀನೆನ್ನುವ ವಿಚಾರವು ನನಗೆ ನೂತನವಾದುದಲ್ಲ. ಎಷ್ಟೋ ಜನ ಮೂಢರು ನನಗೆ ಈ ತರದ ಅಪವಾದಗಳನ್ನು ಪ್ರತಿ ನಿತ್ಯ ಹೊರಿಸುತ್ತಿರುವರು. ನೀನು ಈ ರೀತಿ ಸೌಮ್ಯವಾಗಿ ನುಡಿದೆ, ಇದು ನನ್ನ ಸುದೈವದ ಮಾತು. ಕೆಲಕೆಲವರು ಬಾಯಿಗೆ ಬಂದಂತೆ ಬೈಯುವದೂ ಉಂಟು. ಆದರೆ ನಾನು ಮಾತ್ರ ಈ ವಿಷಯದಲ್ಲಿ ಎಷ್ಟು ಮಾತ್ರವೂ ಅಪರಾಧಿಯಲ್ಲವೆಂಬವನ್ನು ನನ್ನ ಆತ್ಮವು ಸಂಪೂರ್ಣವಾಗಿ ಹೇಳುತ್ತಿರುವದು. ಆದರಿಂದಲೇ ನಾನು ಆ ಮಾತುಗಳು ಕೇಳಿದರೂ ಕೇಳದಂತೆಯೇ ಇರುತ್ತೇನೆ." ಎಂದನು.

ಈ ಮಾತಿನ ಭಾವವು ಪಾರ್ವತೀ ದೇವಿಗೆ ಗೊತ್ತಾಗಲಿಲ್ಲ. ಆಗಲವಳು " ಹೀಗೆಂದರೇನು"? - ಎ ಪರಮೇಶ್ವರನು, ನಡುವೆಯೇ- "ನೀನು ಕೇಳುವ ಮಾ

ತು ನನಗೆ ತಿಳಿಯಿತು. ದೇವೀ, ಇಲ್ಲಿ ನೆರೆದಿರುವ—ಪ್ರತಿನಿತ್ಯ ನೆರೆಯುತ್ತಿರುವ—ಕೋಟ್ಯವಧಿ ಜನರಲ್ಲಿ ನಿರ್ಮಲವಾದ ಅಂತಃಕರಣವುಳ್ಳವರು ಎಷ್ಟು ಜನರಿರುವರು? ಸಕಲ ಪ್ರಾಣಿಗಳನ್ನೂ ಸಮಭಾವದಿಂದ ನೋಡುವಷ್ಟು ಮನಸ್ಸಿನ ಉನ್ನತಿಯನ್ನು ಪಡೆದವರು ಎಷ್ಟು ಜನರು? ಅದಾವದೂ ಇಲ್ಲದಿದ್ದರೂ ಕ್ಷಣಕಾಲದ ಮಟ್ಟಿಗಾದರೂ ನಿಶ್ಚಲವಾದ ಭಕ್ತಿಯಿಂದ ಗಂಗಾದೇವಿಯ ನಾಮೋಚ್ಚಾರಣೆ ಮಾಡುವವರೂ ಆತ್ಮವಿಶ್ವಾಸವುಳ್ಳವರೂ ಆ ದೇವಿಯ ಮಹಿಮೆಯಲ್ಲಿ ಅಂತಃಕರಣಪೂರ್ವಕವಾದ ಶ್ರದ್ಧೆಯುಳ್ಳವರೂ ಎಷ್ಟು ಮಂದಿ? ನಿನಗೀ ಮಾತನ್ನು ಪ್ರತ್ಯಕ್ಷವಾಗಿಯೇ ತೋರಿಸುತ್ತೇನೆ, ನಡೆ." ಎನ್ನುತ್ತ ಮತ್ತೂ ಏನೇನೋ ವಿಚಾರಗಳನ್ನೂ ತಾವು ಮಾಡಬೇಕಾಗಿರುವ ಸಂಗತಿಗಳನ್ನೂ ಅವಳಿಗೆ ಸೂಚಿಸಿದನು. ತರುವಾಯ ಇಬ್ಬರೂ ಮುಂದಕ್ಕೆ ನಡೆದರು.

ಭಾಗೀರಥೀನದಿಯ ಉತ್ತರದಂಡೆಗುಂಟ ವರುಣಾ ಸಂಗಮದಿಂದ ಅಸೀ ಸಂಗಮದವರೆಗೆ ಅರ್ಧ ಚಂದ್ರಾಕಾರವಾಗಿ ೩-೪ ಮೈಲುಗಳ ವರೆಗೆ ಹಬ್ಬಿರುವ ಕಾಶೀಪಟ್ಟಣದ ನೋಟವು ಬಹು ಪ್ರೇಕ್ಷಣೀಯವಾಗಿದೆ. ಈ ನೋಟದ ಭವ್ಯತೆ ಮನೋಹರತೆ ಶ್ರೇಷ್ಠತೆಗಳನ್ನು ಕುರಿತು ಅನೇಕ ಪರದೇಶದ ಪ್ರವಾಸಿಕರೂ ಪರಿ ಪರಿಯಿಂದ ವರ್ಣಿಸಿರುವರು. ಈ ಸ್ಥಳದಲ್ಲಿರುವ ಅನೇಕ ಘಟ್ಟಗಳಲ್ಲೊಂದಾದ ಪುಣ್ಯಾತ್ಮನಾದ ಸತ್ಯವ್ರತ ಶ್ರೀಹರಿಶ್ಚಂದ್ರ ಮಹಾರಾಜನ ಹೆಸರುಳ್ಳ ಹರಿಶ್ಚಂದ್ರ ಘಾಟಿನ ಹತ್ತರ ಒಂದು ದಿನ ಪ್ರಾತಃಕಾಲದಲ್ಲಿ ದರಿದ್ರವೇಷಧಾರಿಣಿಯಾದ ಅಬಲೆಯೊಬ್ಬಳು ಮೃತಪತಿಯ ಮಸ್ತಕವನ್ನು ತೊಡೆಯ ಮೇಲಿಟ್ಟುಕೊಂಡು ತನ್ನ ಸಂಸಾರದ ಅವರ್ಣನೀಯವಾದ ದುರವಸ್ಥೆಯನ್ನೂ ತನಗೊದಗಿಗಿರುವ ಮಹಾವಿಪತ್ತನ್ನೂ ಬಹು ಪರಿಯಿಂದ ಹಾಡಿ ಹಾಡಿ ಅಳುತ್ತಲಿದ್ದಳು. ಅಂದು ಗಂಗಾನದಿಗೆ ಸ್ನಾನಕ್ಕೆಂದು ಬಂದ ಬ್ರಾಹ್ಮಣರೂ ಶೂದ್ರರೂ ಇನ್ನೂ ಅನೇಕರೂ ಅವಳ ಹತ್ತರದಿಂದ ಹಾದು ಹೋಗುವಾಗ ಆ ಕರುಣಾಜನಕವಾದ ನೋಟವನ್ನು ನೋಡಿ ಆ ಸಾಧ್ವಿಯ ಗೋಳಾಟವನ್ನು ಕೇಳಿ ಕ್ಷಣಹೊತ್ತು ನಿಲ್ಲುವರು. ಕೆಲವರು ಹಾಗೆಯೇ ಏನೋ ಒಂದು ತರದ ತಿರಸ್ಕಾರವನ್ನೋ ಅಹಂಭಾವವನ್ನೋ ವ್ಯಕ್ತಪಡಿಸುವ ಸ್ವರದಿಂದ " ಉಹು ! ಆದದ್ದು ಆಗಿ ಹೋಗಿಹ, ಪೂರ್ವದ ಕರ್ಮ, ಹುಚ್ಚಿ! ಇನ್ನು ಅತ್ತು ಮಾಡುವಳೇನು? " ಎಂದು ಹೇಳುತ್ತ ಸಾಗುತ್ತ ಹೋದರು. ಮತ್ತೆ ಕೆಲವರು ಅವಳ ಆ ದುಃಖಮಯವಾದ ಸ್ಥಿತಿ

ಯನ್ನು ನೋಡಿ ಮನಕರಗಿದವರಾಗಿ ಸಹಾನುಭೂತಿಯಿಂದ ಹತ್ತಿರ ಬಂದು, "ಅಮ್ಮಾ! ಏನು ಮಾಡುವುದು? ವಿಚಿತ್ರವಾದೀ ಸಂಸಾರದ ಸ್ಥಿತಿಯೇ ಹೀಗೆ; ಇಂದು ಕಂಡವರ ಮೋರೆಯನ್ನು ನಾಳೆ ಕಾಣುವೆನೆಂಬ ಭರವಸೆಯಿಲ್ಲ. ಈಗಿದ್ದ ಸ್ಥಿತಿಯು ಇನ್ನೊಂದು ತಾಸಿಗೆ ಉಳಿಯುವದಿಲ್ಲ. ಒಂದು ನಿಮಿಷ ಮುಂದಾಗುವದನ್ನು ಈಗ ನಾವು ಎಷ್ಟು ಮಾತ್ರವೂ ತಿಳಿಯಲಾರೆವು. ಸುಮ್ಮನೆ ಅತ್ತು ಮಾಡುವೆಯೇನು? ಮುಂದಿನ ಕೆಲಸವನ್ನು ಸಾಗಿಸೋಣ; ನಮ್ಮಿಂದ ನಿನಗೇನಾದರೂ ಸಹಾಯವಾಗಬೇಕಾಗಿದ್ದರೆ ಹೇಳು, ತಾಯೀ!" ಎಂದು ನುಡಿದರು.

ಆ ಮಾತನ್ನು ಕೇಳಿ ಅಸಹಾಯಕಳಾದಾ ಅಬಲೆಯು—"ತಂದೆಗಳಿರಾ, ಮಹದುಪಕಾರವಾಯಿತು; ತಾವು ಹೇಳಿದ ಮಾತು ಸತ್ಯವೇಸರಿ. ನನಗೂ ತಿಳಿಯುತ್ತದೆ. ಆದರೆ ಮಾಡಲೇನು! ವಿಚಾರ ಮಾಡಿದರೆ ಎಲ್ಲವೂ ತಿಳಿಯುತ್ತದೆ. ಆದರೆ ಉಕ್ಕಿ ಬರುವ ಮನಸ್ಸಿನ ದುಃಖಾತಿಶಯದ ಭರದಲ್ಲಿ ವಿಚಾರಕ್ಕೆ ಅವಕಾಶವೇ ಉಳಿಯುವದಿಲ್ಲ. ಪುಣ್ಯಾತ್ಮರಾದ ತಮ್ಮ ಸಹಾನುಭೂತಿಪೂರ್ಣವೂ ವಿಚಾರಯುಕ್ತವೂ ಆದ ಉಪದೇಶ ವಾಕ್ಯಗಳನ್ನು ಕೇಳಿ ನನಗೆ ತುಸು ಸಮಾಧಾನವಾಯಿತು. ಧರ್ಮನಿಷ್ಠರೂ, ವ್ರತೋಪವಾಸಾದಿ ತಪೋನಿಷ್ಠರೂ ಆದ ತಮ್ಮ ಸನ್ನಿಧಿಯಲ್ಲಿ ನನ್ನದೊಂದು ವಿಜ್ಞಾಪನೆಯಿರುವುದು. ತಮ್ಮ ಈ ರೀತಿಯಾದ ಸದಾಚಾರಗಳನ್ನು ನಾನು ಬಹು ದಿವಸಗಳಿಂದಲೂ ನೋಡಿರುವೆನು. ಕೈವಲ್ಯದಾತೆಯಾದ ಭಾಗೀರಥೀ ತೀರದಲ್ಲಿ, ಜಗನ್ನಿಯಂತನಾದ ಶ್ರೀ ವಿಶ್ವನಾಥನ ಸನ್ನಿಧಿಯಲ್ಲಿ, ಆತನ ಸೇವೆಯನ್ನು ನಿಷ್ಠೆಯಿಂದ ಮಾಡುತ್ತ ವಾಸಿಸಿರುವ ತಾವೆಲ್ಲರೂ ಪರಮ ಪವಿತ್ರರಾಗಿರಲಿಕ್ಕೇ ಬೇಕೆಂಬದು ಸಹಜವೇ ಸರಿ. ಹಾಗು ತಮ್ಮ ಕೊರಳೊಳಗಿನ ರುದ್ರಾಕ್ಷ-ಮಾಲೆಯೂ ಹಣೆಯ ಮೇಲಿನ ವಿಭೂತಿಯ ರೇಖೆಗಳೂ ತಾವು ಪೂಜ್ಯರೆಂಬದನ್ನು ಸಾರುತ್ತಿರುವವು. ನೆರೆದಿರುವ ಈ ನೂರಾರು ಜನರಲ್ಲಿ ಯಾರಾದರೂ ಒಬ್ಬರು ಇನ್ನೊಮ್ಮೆ ಈ ಗಂಗಾ ನದಿಯಲ್ಲಿ ಸ್ನಾನಮಾಡಿ ಬಂದು ಮೃತನಾಗಿರುವ ಈ ನನ್ನ ಪತಿಯ ಮಸ್ತಕದ ಮೇಲೆ ವರದ ಹಸ್ತವನ್ನಿಡಬೇಕು. ತಾವು ನಿಜವಾಗಿಯೂ ಪವಿತ್ರರಾಗಿದ್ದರೆ ನನ್ನ ಪತಿಯು ನಿದ್ದೆಯಿಂದ ಎಚ್ಚತ್ತವನೋ ಎಂಬಂತೆ ಒಮ್ಮಿಂದೊಮ್ಮೆ ಎದ್ದು ಕೂಡ್ರುವನು. ಆದರೆ ತಮ್ಮಲ್ಲಿ ಏನಾದರೂ ಪಾಪವಿದ್ದರೆ, ಅಪ್ಪಿತಪ್ಪಿಯಾದರೂ ಪರಪೀಡೆ, ಪರಸ್ವಾಪಹಾರ ಮುಂತಾದ ದುಷ್ಕೃತ್ಯಗಳನ್ನು ಮಾಡಿದ ದೋಷವು ತಮ್ಮಲ್ಲಿದ್ದರೆ,

ಮಾತ್ರ ಮಹಾ ದುಷ್ಪರಿಣಾಮವಾಗುವದು. ಅಂಥವರ ಹಸ್ತಸ್ಪರ್ಶದಿಂದ ನನ್ನ ಪತಿಯು ಪುನರ್ಜೀವಿತನಾಗಲಾರನು; ಇಷ್ಟೇ ಅಲ್ಲ, ಹಾಗೆ ಸ್ಪರ್ಶಮಾಡಿದ ಮನುಷ್ಯನು ಸಪರಿವಾರವಾಗಿ ನಾಶಹೊಂದುವನು. ಈ ರೀತಿಯಾಗಿ ನನಗೆ ನಿನ್ನಿನ ರಾತ್ರಿ ಕನಸಿನಲ್ಲಿ ಶ್ರೀ ವಿಶ್ವೇಶ್ವರನ ಅಪ್ಪಣೆಯಾಗಿರುವದು. ಆದ್ದರಿಂದ ತಮ್ಮಲ್ಲಿ ಯಾರಾದರೂ ಒಬ್ಬರು ದಯಮಾಡಿ ಇಷ್ಟು ಕೆಲಸವನ್ನು ಮಾಡಿರಿ." ಎಂದು ಬಹು ದೈನ್ಯದಿಂದ ಬಿನ್ನವಿಸಿಕೊಂಡಳು.

ಆ ಸಾಧ್ವೀ ಶಿರೋಮಣಿಯು ಈ ಮಾತುಗಳನ್ನು ಕೇಳಿದ ಕೂಡಲೆ ಅಲ್ಲಿ ನೆರೆದಿದ್ದವರ ಮೋರೆಯ ಮೇಲಿನ ಕಳೆಯು ಒಮ್ಮಿಂದೊಮ್ಮೆ ಇಳಿಯಿತು. ಒಬ್ಬರ ಮುಖವನ್ನೊಬ್ಬರು ಮಿಕಿ ಮಿಕಿ ನೋಡತೊಡಗಿದರು. ಯಾರೊಬ್ಬರೂ ಮುಂದೆ ಬರಲೊಲ್ಲರು. ಒಬ್ಬೊಬ್ಬರೇ ಹಿಂದುಗಾಲಿಕ್ಕಿ ಸರಿದು ಮರೆಯಾಗಹತ್ತಿದರು "ಇದೇನು ಪೇಚಾಟ! ಬೇಕೆಂದು ಕರೆದು ಕಚ್ಚಿಸಿಕೊಂಡ ಹಾಗಾಯಿತಲ್ಲ!" ಎನ್ನುವ ಅಭಿಪ್ರಾಯವು ಎಲ್ಲರ ಮುಖದಲ್ಲಿಯೂ ಒಡೆದು ತೋರಹತ್ತಿತು. ತುಸು ಹೊತ್ತಿನಲ್ಲಿಯೇ ನೆರೆದವರು, ಹೊಳೆಯುವ ಹೊಂಬಣ್ಣದ ಹಿತ್ತಾಳಿಯ ಕಂಬಿಗೆ ಥಾಲಿಗಳನ್ನು ಹಿಡಿದುಕೊಂಡಿದ್ದವರು ಕೆಲವರು, ಬೆಳ್ಳಿಯ ಮುಗುಟನ್ನು ಹಚ್ಚಿದ ಹಾವುಗೆಯನ್ನು ಮೆಟ್ಟಿ ಕಾವಿಯ ವಸ್ತ್ರವನ್ನುಟ್ಟ ಸನ್ಯಾಸಿ ವೇಷದವರು ಕೆಲವರು, ನಾಭಿಯವರೆಗಿನ ಮುಂಭಾಗವೆಲ್ಲ ಮರೆಯಾಗುವಷ್ಟು ರುದ್ರಾಕ್ಷ ಮಾಲೆಯನ್ನು ಧರಿಸಿದವರು ಕೆಲವರು, ಎಲ್ಲರೂ ತಮ್ಮ ತಮ್ಮ ದಾರಿಯನ್ನು ಹಿಡಿದು ನಡೆದರು. ಆ ಸಾಧ್ವಿಗೆ ಸಹಾಯ ಮಾಡುವದು ಒತ್ತಟ್ಟಿಗಿರಲಿ, ಅವಳ ಮಾತಿಗೆ ಪ್ರತ್ಯುತ್ತರವನ್ನು ಕೂಡ ಯಾರೂ ಕೊಡಲಿಲ್ಲ. ಅವಳು ಪುನಃ ಮೊದಲಿನಂತೆ ಅತ್ತು ಗೋಳಾಡಹತ್ತಿದಳು. ಕೆಲಹೊತ್ತಿನ ಮೇಲೆ ಮತ್ತೆ ಕೆಲವರು ಅಲ್ಲಿ ಗುಂಪು ಗೂಡಿ ನೆರೆದರು. ಅವರೊಡನೆಯೂ ಇದೇ ತರದ ಸಂಭಾಷಣವು ನಡೆಯಿತು. ಅವರಲ್ಲಿಯೂ ಯಾರೊಬ್ಬರೂ ಆ ಸಾಧ್ವಿಗೆ ಸಹಾಯ ಮಾಡಲು ಧೈರ್ಯಗೊಳ್ಳಲಿಲ್ಲ. ಹೀಗೇಯೇ ಮಧ್ಯಾಹ್ನದ ಎರಡು ಗಂಟೆಯ ವರೆಗೆ ನಡೆಯಿತು. ನೆರೆದವರು ತಿರುಗಿ ಹೋಗುವಾಗ ಆ ಸಾಧ್ವಿಯು ಕಣ್ಮರೆಯಾಗುವವರೆಗೆ ಮೌನದಿಂದಿರುವರು. ಮುಂದೆ ತಮ್ಮ ತಮ್ಮ ಪೌರುಷವನ್ನು ಸೂರೆ ಮಾಡಲಾರಂಭಿಸುವರು. "ನಾನು ಸ್ನಾನ ಮಾಡಿ ಆ ಮೃತನನ್ನು ಮುಟ್ಟಬೇಕೆಂದು ಮಾಡಿದ್ದೆನು, ಅಷ್ಟರ ಈಗ ಪುನಃ ಯಾ[illegible] ಗೆಯಲ್ಲಿ ನ[illegible]ಗುತ್ತಿತ್ತೆಂದ

ಬಿಕ್ಕಿಸು!" ಎಂದು ಕೆಲವರು ಹೇಳುವರು. ಮತ್ತೆ ಕೆಲವರು, ಎಲ್ಲಿಯ ಹೆಂಗಸೋ ಎಲ್ಲಿಯ ವಿಶ್ವನಾಥನ ಅನುಜ್ಞೆಯೋ ಎಲ್ಲವೂ ಸುಳ್ಳೇ; ನಾವು ಪುಣ್ಯವಂತರಾಗಿರುವದಕ್ಕೂ ಅವಳ ಗಂಡನು ಬದುಕುವದಕ್ಕೂ ಏನು ಸಂಬಂಧ ? ಎಂದು ನುಡಿದರು. ಇನ್ನನೇಕರು "ಸರಿ, ಅಪ್ಪಿ ತಪ್ಪಿಯೂ ಪಾಪವು ಸಂಘಟಿಸಿರಲಾಗದಂತೆ ! ನಾವೆಲ್ಲಿ ಅದರ ಲೆಕ್ಕವನ್ನಿಟ್ಟು ಕುಳಿತಿದ್ದೇವೆ ? ಮೇಲೆ ಇವಳ ಗಂಡನನ್ನು ಬದುಕಿಸಿಕೊಂಡು ಹೋಗಿ ನಾವು ವಿಪತ್ತಿಗೆ ಗುರಿಯಾಗಬೇಕು." ಎಂದು ಮುಂತಾಗಿ ಬಾಯಿಗೆ ಬಂದಂತೆ ಹರಟಿದರು. ಎಲ್ಲರ ಅಭಿಪ್ರಾಯವೂ ಒಂದೇ. ಸಾವಿರ ಸುತ್ತು ಸುತ್ತಿದರೂ ಗಂಟು ಒಂದೇ ಸರಿ. ಒಬ್ಬರಿಗೂ ಅಂತರಂಗ ಶುದ್ಧಿಯಿರಲಿಲ್ಲವೆಂಬದೊಂದೇ ನಿಶ್ಚಿತವಾದ ಮಾತು.

ಮಧ್ಯಾಹ್ನದ ಮೂರು ಗಂಟೆಯ ಸುಮಾರಕ್ಕೆ ಒಬ್ಬ ದಾರಿಕಾರನು ಆ ಸಾಧ್ವಿಯು ಅಳುತ್ತ ಕುಳಿತಿರುವ ಸ್ಥಳದ ಸಮೀಪದಿಂದ ಹಾಯ್ದು ಹೋಗುತ್ತಿದ್ದನು. ಅವನ ವೇಷವನ್ನು ನೋಡಿದರೆ ಕೇವಲ ಹುಚ್ಚನಂತೆ ತೋರುತ್ತಿದ್ದನು. ಕೈಯಲ್ಲೊಂದು ನೂರೆಂಟು ತೆಗ್ಗು ಬಿದ್ದ ಚಿಪ್ಪಾಡಿಯಾದ ತಂಬಿಗೆ, ಉಟ್ಟ ಧೋತರಕ್ಕೆ ನೂರೆಂಟು ಛಿದ್ರಗಳು. ಮೈಮೇಲಿನ ಜಾಳಿಗೆಯಂಥ ಪಂಜೆಯಲ್ಲಿ ಕಟ್ಟಿದ ನಾಲ್ಕು ಹಿಡಿ ಅಕ್ಕಿಯು ಕಾಳೂ ಅದರೊಡನೆ ಕೂಡಿಸಿರುವ ಬೇಳೆಯೂ ಒಡೆದು ಕಾಣಿಸುತ್ತಿದ್ದವು. ಇನ್ನೊಂದು ಕೈಯಲ್ಲಿ ಹಸುರು ತೊಪ್ಪಲದಲ್ಲಿ ನಾಲ್ಕಾರು ಮೀನುಗಳನ್ನು ಅಡಗಿಸಿ ಹಿಡಿದಿದ್ದನು. ಇನ್ನೂ ಸ್ನಾನವಿಲ್ಲ; ಸಂಧ್ಯಾವಂದನೆಯಿಲ್ಲ. ಮೊದಲು ಜಾತಿಯಿಂದ ಬ್ರಾಹ್ಮಣನಾಗಿದ್ದನಂತೆ ! ಆತನು ಆ ದಾರಿಯಿಂದ ಹೋಗುವಾಗ ಅಲ್ಲಿ ಅಳುತ್ತಿರುವ ಸಾಧ್ವಿಯನ್ನು ನೋಡಿ ಧಾವಿಸಿ ಬಂದು "ತಾಯೀ, ಅಳಬೇಡವಮ್ಮಾ. ಏನಾಯಿತು ? ನಿಮ್ಮ ದೇಶವಾವುದು ? ಇಲ್ಲಿಗೇತಕ್ಕೆ ಬಂದಿದ್ದಿರಿ ? ಇವರಾರು ? ಅಹಹಾ! ಮೃತರಾಗಿರುವರೇ ? ಏನಾಗಿತ್ತಮ್ಮಾ! ಅಯ್ಯೋ ದೈವವೆ !" ಎಂದು ಮುಂತಾಗಿ ಶೋಕಾಕುಲತೆಯಿಂದ ನುಡಿದನು. ಸಾಧ್ವಿಯು ಮಹಾ ಮಹಾ ಪೂಜ್ಯರೆಂದು ತೋರುವವರ ಸ್ಥಿತಿಯನ್ನು ಕಣ್ಣಾರೆ ಕಂಡಿದ್ದಳಾದ್ದರಿಂದ ಈ ಹುಚ್ಚನಂತೆ ತೋರುವ ಕ್ಷುದ್ರ ಮನುಷ್ಯನಿಂದೇನಾದೀತೆಂದು ಅವನ ಮಾತುಗಳಿಗೆ ಉತ್ತರವನ್ನೇ ಕೊಡದೆ ಮೊದಲಿನಂತೆಯೇ ಅಳುತ್ತ ಕುಳಿತುಕೊಂಡಳು. ಇದನ್ನು ನೋಡಿ ಆತನಿಗೆ ತುಂಬಾ ವ್ಯಸನವಾಯಿತು. ಅವನ ಕುತ್ತಿಗೆಯ ಶಿರಗಳು ಉಬ್ಬಿದವು. ಕಣ್ಣುಗಳಲ್ಲಿ ನೀರ

ತುಂಬಿತು. ದುಃಖಾತಿರೇಕವನ್ನು ನುಂಗಿಕೊಳ್ಳಲಾರದೆ ಆತನು "ಗಳಗಳ" ಅತ್ತು ಬಿಟ್ಟನು! ಇದನ್ನು ನೋಡಿ ಆ ಸಾಧ್ವಿಯು "ತಂದೆಯೇ, ಪಾಪಿಯಾದೆನಗಾಗಿ ಅಳುವೆಯೇಕೆ? ನೀನಾರು? ಮಹಾ ಮಹಾ ಪೂಜ್ಯರೆನಿಸಿಕೊಳ್ಳುವ ಈ ಕಾಶೀ ಕ್ಷೇತ್ರವಾಸಿಗಳಲ್ಲಿ ಯಾರಿಗೂ ಎನ್ನಯ ಈ ದುರವಸ್ಥೆಯನ್ನು ನೋಡಿ ಕರುಣೆಯುಂಟಾಗಲಿಲ್ಲ. ಒಬ್ಬರೂ ಅನಾಥೆಯಾದೆನಗೆ ಸಹಾಯ ಮಾಡಲು ಸಿದ್ಧರಾಗಲಿಲ್ಲ. ನನ್ನಂತೆಯೇ ದೇಶಿಗನಾಗಿ ತೋರುವ ನಿನ್ನಿಂದ ಏನಾದೀತು?" ಇದನ್ನು ಕೇಳಿ ಆ ದಾಡಿಕಾರನು ನಡುವೆಯೇ– "ತಾಯೀ, ಏತರ ಸಹಾಯವಮ್ಮಾ! ತನಗಿಷ್ಟು ಹೇಳಬಾರದೇ, ಸಾಧ್ಯವಿದ್ದರೆ ನಾನು ಮಾಡುವೆನು. ಈ ಜೀವನವನ್ನಾದರೂ ನಿನ್ನ ಸಲುವಾಗಿ ಕೊಡಲು ಸಿದ್ಧನಿರುವೆನು" ಎಂದನು. ಆಗಲಾ ಸಾಧ್ವಿಯು "ಎಂಥೆಂಥ ಸಾಧು ಸನ್ಯಾಸಿಗಳಂತೆ ತೋರಿದವರೇ ತಮ್ಮಿಂಗದಾಗದೆಂದು ಹೋಗಿಬಿಟ್ಟರು. ಅಂದಮೇಲೆ ನಿನ್ನಿಂದೇನಾದೀತು. ಇರಲಿ." ಎಂದು ಮೊದಲಿನಂತೆಯೇ ತನ್ನ ಪತಿಯ ಪುನರ್ಜೀವನದ ವೃತ್ತಾಂತವನ್ನು ಹೇಳಿದಳು. ಅದನ್ನು ಕೇಳಿದೊಡನೆಯೇ ಆತನ ಮುಖದಲ್ಲಿ ಆನಂದದ ಕಳೆಯು ಉಕ್ಕಿಹರಿತು. ಅವನು ತಾನು ತಂದಿರುವ ಸಾಮಗ್ರಿಗಳನ್ನು ಅಲ್ಲಿಯೇ ಇಟ್ಟು, ನದಿಯಲ್ಲಿ ಇಳಿದು ನಿಂತುಕೊಂಡು, ಕೈಜೋಡಿಸಿ ಅತ್ಯಂತ ಭಕ್ತಿಯಿಂದ,

"ಸದ್ಯಃಪಾತಕಸಂಹಂತ್ರೀ ಸದ್ಯದುಃಖವಿನಾಶಿನೀ ।
ಸುಖದಾ ಮೋಕ್ಷದಾ ಗಂಗಾ ಗಂಗೈವಪರಮಾಗತಿಃ" ॥

ಎಂದು ಒಮ್ಮೆ ಉಚ್ಚ ಸ್ವರದಿಂದ ಉಚ್ಚರಿಸಿದನು. ಹಾಗು ಮೂರು ಬಾರಿ ನದಿಯಲ್ಲಿ ಮುಳುಗಿ ಎದ್ದನು. ತರುವಾಯ ಆ ತನ್ನ ಒಡಕ ತಂಬಿಗೆಯಲ್ಲಿ ನೀರನ್ನು ತುಂಬಿಕೊಂಡು ಮೇಲೆ ಬಂದು ನದಿಯ ದಂಡೆಯಲ್ಲಿರುವ ಮಳಲನ್ನು ಆ ನೀರಿನಿಂದ ತೋಯಿಸಿ ಒಂದು ಲಿಂಗಾಕಾರವನ್ನು ಮಾಡಿದನು. ಬಳಿಕ ತಾನು ಬರುವಾಗ ಮೀನವನ್ನು ಮರೆಮಾಡಿಕೊಳ್ಳಲು ತಂದಿದ್ದ ಬಿಲ್ವ ಪತ್ರೆಯ ತ್ರಿದಳಗಳನ್ನು ಹರಿದು ತಂದು ಪರಮಭಕ್ತಿ ಪೂರ್ವಕವಾಗಿ ಆ ಲಿಂಗಕ್ಕೆ ಏರಿಸಿ ಸಾಷ್ಟಾಂಗ ನಮಸ್ಕಾರ ಮಾಡಿದನು. ಇಷ್ಟಾದ ಬಳಿಕ ಆಕೆಯು ಕುಳಿತಿದ್ದಲ್ಲಿಗೆ ಬಂದು ಮತ್ತೊಮ್ಮೆ ತನ್ನ ಇಷ್ಟದೇವತೆಯನ್ನು ಧ್ಯಾನಿಸಿ ಮೃತನ ಮಸ್ತಕದ ಮೇಲೆ ತನ್ನ ಹಸ್ತವನ್ನಿರಿಸಿದನು. ಪರಕ್ಷಣದಲ್ಲಿಯೇ ಮೃತನು "ಜಯ! ಶಂಕರ!" ಎಂದು

ಎದ್ದು ಕುಳಿತನು. ಇದನ್ನು ನೋಡಿ ಸಾಧ್ವಿಯು ಆಶ್ಚರ್ಯ ವಿಸ್ಮಯಗಳಿಂದ ಬೆಪ್ಪಾಗಿ ಕುಳಿತು ಬಿಟ್ಟಳು. ಆಗ ದಾರಿಕಾರನು ತಾಯೀ, ನನ್ನ ಕೆಲಸವು ತೀರಿತು. ಹೋಗಿ ಬರುತ್ತೇನೆ. ಎಂದು ವಿನಯದಿಂದ ನುಡಿದು ಹೊರಟು ಹೋದನು,

ಇತ್ತ, ಪರಮೇಶ್ವರನು– "ದೇವೀ, ನೋಡಿದೆಯಾ, ಈ ಜಗತ್ತಿನ ಮಹಿಮೆಯನ್ನು! ಮನುಷ್ಯನ ಯೋಗ್ಯತೆಯು ಅವನ ಉಡಿಗೆ ತೊಡಿಗೆಗಳಿಂದ ಗೊತ್ತಾಗುವದಿಲ್ಲ. ಅವನ ಬಾಹ್ಯಾಚರಣೆಗಳಿಂದ ಗೊತ್ತಾಗುವದಿಲ್ಲ. ಅಂತರಂಗ ಶುದ್ಧಿಯಿಲ್ಲದೆ ಬಾಹ್ಯಾಡಂಬರಕ್ಕಾಗಿ ಕಾಶಿಯ ಯಾತ್ರೆಯನ್ನು ಮಾಡುವದರಿಂದಾಗಲಿ, ಗಂಗಾ ನದಿಯಲ್ಲಿ ಮುಳುಗೇಳುವದರಿಂದಾಗಲಿ, ಎಷ್ಟು ಮಾತ್ರವೂ ಪ್ರಯೋಜನವಾಗಲಾರದು. ಮುಕ್ತಿಗೆ ಭಕ್ತಿಯೇ ಕಾರಣವಲ್ಲದೆ ಆಡಂಬರದ ಆಚರಣೆಗಳು ಎಷ್ಟು ಮಾತ್ರವೂ ಕಾರಣವಾಗಲಾರವು." ಎಂದು ನುಡಿಯಲು ದೇವಿಯು ತನ್ನ ತಪ್ಪು ತಿಳುವಳಿಕೆಯನ್ನು ಒಪ್ಪಿಕೊಂಡಳು. ಇಬ್ಬರೂ ಕೈಲಾಸವನ್ನು ಕುರಿತು ಹೊರಟು ಹೋದರು.

## ಪ್ರಾರ್ಥನೆ.

" ಹರಿಯೆ ನಿನ್ನೊಳು ಭಕ್ತಿ ಮುಕ್ತಿಗೆ ।
ಸರಳ ಮಾರ್ಗವದೆಂಬುದರಿಯುದೆ ।
ತಿರುತಿರುಗಿ ಮಾಯಾ ಪ್ರಪಂಚದಿ ಸುತ್ತಿ ಬೇಸತ್ತೆ ॥
ಪರಮ ಭಕ್ತಿಯೊಳೀಗ ನಿನ್ನಯ ।
ಚರಣತಲದಲಿ ಬಿದ್ದು ಬೇಡುವೆ ।
ಪರಿಹರಿಸೊ! ನರಜನ್ಮವನು ಕೊಂಡೀ ಸುಮಾಂಡಲಿಯು "

---

## ಕುಂದಮಾಲೆ.

ಇದು ಮಹಾಕವಿ ದಿಙ್ನಾಗನು ವಿರಚಿಸಿದ ಸಂಸ್ಕೃತ ನಾಟಕದ ಗದ್ಯಾನುವಾದವು. ಕನ್ನಡದ ಕಟ್ಟಾಭಿಮಾನಿಗಳೂ ಸಂಸ್ಕೃತದಲ್ಲಿಯೂ ಹುಂಬಾ ಪರಿಜ್ಞಾನವುಳ್ಳವರೂ ಆದ ಶ್ರೀ. ಬಿ. ರಾಮರಾವ್. ಎಮ್. ಎ. ಎಲ್ ಎಲ್. ಬಿ. ಅವರು ಪರಿವರ್ತನಕಾರರು. ಓದುವವರಿಗೂ ರಂಗಭೂಮಿಯಲ್ಲಿ ಅಭಿನಯಿಸುವವರಿಗೂ ಈ ಹೊಸನಾಟಕವು ಸರ್ವರೀತಿಯಿಂದಲೂ ಉಪಯುಕ್ತವಾಗಿದೆಯೆಂದರೆ ಅತಿಶಯೋಕ್ತಿ ಯಾಗಲಾರದು. ನಾಟಕದ ಕಥೆಯೂ ಹೃದಯ-ದ್ರಾವಕವಾಗಿದೆ. ರಾಮಾಯಣದ ಉತ್ತರಕಾಂಡದ ಪೌರಾಣಿಕ ಭಾಗವೇ ಇದಕ್ಕೆ ಆಧಾರವು. ತಕ್ಕರೀತಿಯಿಂದ ಅಭಿನಯಿಸಿದರೆ ೧-೪-೬ನೆಯ ಅಂಕಗಳಲ್ಲಿ ಪ್ರೇಕ್ಷಕರು ಕಣ್ಣೀರು ಸುರಿಸದಿರಲಾರರು. ಓದುವಾಗಲೂ ದುಃಖರಸದಿಂದ ಅಂತರಂಗವು ತುಂಬಿ ಬರುವದು ಇಂತಹ ಪೌರಾಣಿಕ ನಾಟಕಗಳನ್ನು ಕನ್ನಡ ಕಂಪನಿಯವರು ಮುಂದೆ ತರುವದು ಹೆಚ್ಚು ಮಹತ್ವದ ಮಾತು. ಬೆಲೆ ೦-೧೨-೦.

**ಮದ್ರಾಸದ (Vepery) ಬಿ. ಎಮ್. ನಾಥ ಕಂಪನಿಯವರಲ್ಲಿ ಪುಸ್ತಕಗಳು ದೊರೆಯುವವು.**

---

ಪುಟ ಸಂಖ್ಯೆ ೧೬. **ವಸ್ತ್ರಾಪಹರಣ.** ಬೆಲೆ ೨ ಆಣೆ.

ಗ್ರಂಥದ ಹೆಸರಿನಿಂದಲೇ ವಿಷಯವೇನೆಂಬದು ತಿಳಿಯುವಂತಿದೆ. ಸುಲಭವಾದ ಸರಳ ಹಳ ಷಟ್ಪದಿಗಳಿಂದ ಈ ಪೌರಾಣಿಕ ಕಥಾಭಾಗವನ್ನು ಓದುಗರ ಮನ ಕರಗುವಂತೆ ಕಾಲಕ್ಕನುಕೂಲವಾದ ರೀತಿಯಲ್ಲಿ ಬರೆದಿರುವ ಬಾಲಕವಿ ಚಿಂಗೊಡ್ಲು ಶಂಕರ ಭಟ್ಟರ ಪ್ರತಿಭೆಯು ಪ್ರಶಂಸನೀಯವಾಗಿದೆ.

ಪತ್ತೆ:— **ವಾಸುದೇವ ಐತಾಳ ಶರಪಾಡಿ,**
**ಬಂಟವಾಳ ಪೋಸ್ಟು (ದ. ಕ.)**

---

## ಜಯ ಕರ್ನಾಟಕ.

ಕನ್ನಡದಲ್ಲಿ ಇಂದಿನ ವರೆಗೆ ಪ್ರಕಟವಾದ ಮಾಸಪತ್ರಿಕೆಗಳಲ್ಲಿ ಆಕಾರದಲ್ಲಿಯೂ ಪ್ರಕಾರದಲ್ಲಿಯೂ ಇದಕ್ಕೆ ಮೊದಲನೆಯ ನಂಬರು ಕೊಡಬೇಕೆಂದು ಬಹು ಜನರು ಅಭಿಪ್ರಾಯಪಟ್ಟಿರುವರು. ಪ್ರತಿ ಹುಣ್ಣಿವೆಗೆ ತಪ್ಪದೆ ಪ್ರಕಟವಾಗುವದು. ಎರಡು ವರುಷಗಳ ಅನುಭವದ ಮಾತಲ್ಲದೆ ಜಾಹಿರಾತಿನೊಳಗಿನ ವರ್ಣನೆಯಲ್ಲ. ವಾಚನಾಭಿರುಚಿಯುಳ್ಳ ಕನ್ನಡಿಗರು ಒಮ್ಮೆ ಪರೀಕ್ಷಿಸಿ ನೋಡಲಿ. ವರ್ಷಿಕ ಚಂದಾ ೫ ರೂ. ೮ ಆಣೆ ಮಾತ್ರ.

ಪತ್ತೆ:— **ವ್ಯವಸ್ಥಾಪಕ ಜಯ ಕರ್ನಾಟಕ ಧಾರವಾಡ.**

ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದಿಂದ ಪ್ರಕಟವಾಗುವ ತ್ರೈಮಾಸಿಕ ಪತ್ರಿಕೆ. ನಾಲ್ಕು ಸಂಚಿಕೆಗಳಿಗೆ ೩೫೦ ಪುಟಗಳಾಗುವುವು. ಪ್ರತಿ ಸಂಚಿಕೆಯಲ್ಲಿಯೂ ಒಂದೆರಡು ಸುಂದರವಾದ ಕಲಾನೈಪುಣ್ಯದರ್ಶಕ ಚಿತ್ರಗಳು ಬಂದೇಬರುವುವು. ಲೇಖನಗಳು ಓದಿ ಓದಿ ವಿಚಾರ ಮಾಡುವಷ್ಟು ಉತ್ತಮ ವರ್ಗಕ್ಕೆ ಸೇರಿದವು. ಮುದ್ರಣಾದಿಗಳು ಅನ್ಯ ಪತ್ರಿಕೆಗಳು ಅನುಕರಣ ಮಾಡುವಂತಿವೆ. ಹೆಚ್ಚಿಗೆ ಹೇಳುವುದೇನು ? ಕನ್ನಡದಲ್ಲಿ ಇಷ್ಟು ಉತ್ತಮವಾಗಿದ್ದು ಇಷ್ಟು ಅಗ್ಗವಾಗಿರುವ ಪತ್ರಿಕೆಗಳಲ್ಲಿ ಇದೇ ಮೊದಲನೆಯದು. ವಾರ್ಷಿಕ ಚಂದಾ ಒಂದೇ ರೂಪಾಯಿ. ಅಂಚೆಯವೆಚ್ಚ ಬೇರೆ.

**ಪತ್ತೆ :—ಕಾರ್ಯದರ್ಶಿ ಕರ್ನಾಟಕ ಸಂಘ**
**ಸೆಂಟ್ರಲ್ ಕಾಲೇಜ, ಬೆಂಗಳೂರು.**

---

## ದೇಶೀಯ ವಿದ್ಯಾಶಾಲಾ ಪತ್ರಿಕೆ.

ಉತ್ತಮ ವರ್ಗದ ತ್ರೈಮಾಸಿಕವು. ದೊಡ್ಡ ಆಕಾರದ ಮೂವತ್ತೆರಡು ಪುಟಗಳ ಸುಂದರ ಮುದ್ರಣದ ನಾಲ್ಕು ಸಂಚಿಕೆಗಳನ್ನು ಎಂಟೇ ಆಣೆಗೆ ಕೊಡುವ ಸಂಪಾದಕರ ಪರಾರ್ಥ ಸಾಧನೆಯು ಆಶ್ಚರ್ಯಕರವಾಗಿದೆ; ಆನಂದಕರವಾಗಿದೆ. ಕನ್ನಡಿಗರು ಅವರ ಈ ಉದಾರಬುದ್ಧಿಯನ್ನು ಉಪಯೋಗಿಸಿಕೊಳ್ಳಲಾರದಿದ್ದರೆ ತಪ್ಪು ಯಾರದು ? ಹೆಚ್ಚಿಗಿನ್ನೇನು ಹೇಳುವುದು.

**ಪತ್ತೆ :—ಸಂ. ದೇ ವಿ. ಶಾಲಾಪತ್ರಿಕೆ, ಹೊಸ ತರಗುಪೇಟೆ,**
**ಬೆಂಗಳೂರು ಸಿಟಿ.**

---

ಕ್ರೌನ್ ಪುಟ ೫೬; **ಕಾವ್ಯರತ್ನಾಕರ.** ಬೆಲೆ ೫ ಆಣೆ.

ಪುತ್ತೂರಿನ (ದ. ಕ) ಶ್ರೀ ಉಗ್ರಾಣ ಮಂಗೇಶರಾಯರು ಕನಕದಾಸ, ಪುರಂದರದಾಸ, ರಾಘವಾಂಕ, ಸಂಚಿಯ ಹೊನ್ನಮ್ಮ, ಕವಿ ಕುಂಜರ ಮುಂತಾದ ಪ್ರಾಚೀನ ಕವಿಗಳ ಕವಿತೆಗಳನ್ನೂ ಕೆಲವು ಹೊಸ ಕವಿತೆಗಳನ್ನೂ ಸಂಗ್ರಹಿಸಿ ಪಾಠಶಾಲೆಯ ಬಾಲರ ಪಾಠಪುಸ್ತಕವಾಗುವಂತೆ ರಚಿಸಿರುವರು. ಕವಿತೆಗಳು ಸುಲಲಿತವಾಗಿವೆ. ಓದುವವರಿಗೆ ಹಳೆಗನ್ನಡ ಹೊಸಗನ್ನಡ ಕವಿತೆಗಳ ಬಂಧ ರಚನೆ, ಲಾಲಿತ್ಯ ಮುಂತಾದವುಗಳನ್ನು ತುಲನೆ ಮಾಡಿನೋಡಿ ವಿನೋದ ಹೊಂದಲು ಅನುಕೂಲಿಸುವಂತಿದೆ. ಶ್ರೀ. ಉ. ಮಂಗೇಶರಾಯರ ಈ ತರದ ಪ್ರಯತ್ನವು ಸ್ತುತ್ಯವಾದದ್ದೆಂದು ನಾವು ಪುನಃ ಹೇಳಬೇಕಾಗಿಲ್ಲ.

# کتب خانہ

## جامعہ عثمانیہ

۱۔ اراکین مجلس اعلیٰ، مجلس رفقاء، مجلس انتظامی،
مجالس شعبہ جات و نصابیہ پانچ کتابیں ایک وقت میں اپنے پاس رکھ سکیں گے۔

۲۔ اساتذہ جامعہ عثمانیہ و کلیہ جات ملحقہ و گزیٹیڈ عہدہ داران جامعہ
اور اراکین دار الترجمہ دس کتابیں ایک ماہ تک اپنے پاس رکھ سکیں گے۔

۳۔ طیلسانین رجسٹر شدہ دو کتابیں بی۔ اے اور انٹرمیڈیٹ
کے طلبہ تین کتابیں ایم۔ اے، ایل ایل بی و تحقیقاتی جماعتوں کے
طلبہ پانچ کتابیں دو ہفتہ تک اپنے پاس رکھ سکیں گے۔

۴۔ مدت مقررہ پہ کتابیں واپس نہ ہوں تو طلبی کے حساب
ایک آنہ یومیہ فی کتاب دیرانہ لیا جائیگا۔

۵۔ بشرط موقع کتابیں گھر پر جاری کی جا سکیں گی مگر اس غرض
کے لئے کتب خانہ میں کتاب کا لانا لازم ہے۔

۶۔ کتابیں گم یا خراب ہو جائیں تو مستعیر پر ذمہ داری
عائد ہوگی۔

۷۔ کتابوں پر
نہ لگا

# ಕರ್ನಾಟಕ ಹಿತೈಷಿಣೀ ಗ್ರಂಥಮಾಲೆ-ಸಚಿತ್ರ

ಉದಾತ್ತವಾದ ನೈತಿಕ ತತ್ವಗಳನ್ನು ಸುಲಭವಾದ ಐತಿಹಾಸಿಕ ಹಾಗು ಪೌರಾಣಿಕ ಕಥೆಗಳ ರೂಪದಿಂದ ಬರೆದು ಅಲ್ಲಲ್ಲಿಗೆ ಮನೋಹರವಾದ ಚಿತ್ರಗಳನ್ನು ಸೇರಿಸಿ ಆರಾರು ತಿಂಗಳಿಗೊಂದರಂತೆ ಪ್ರತಿವರ್ಷ ಎರಡು ಸರ್ವಾಂಗ ಸುಂದರವಾದ ಗ್ರಂಥಗಳನ್ನು ಪ್ರಕಟಿಸುವೆವು. ಗ್ರಂಥಮಾಲೆಯ ಕಾಯಂ ವರ್ಗಣೀದಾರರಿಗೆ ಎಲ್ಲ ಗ್ರಂಥಗಳನ್ನು $\frac{3}{4}$ ಬೆಲೆಗೆ ಕೊಡುವೆವು. ಅಂಥವರು ಮಾಲೆಯಲ್ಲಿ ಪ್ರಕಟವಾಗುವ ಎಲ್ಲ ಗ್ರಂಥಗಳನ್ನು ಕೊಂಡುಕೊಳ್ಳುವೆವೆಂದು ಒಪ್ಪಿಕೊಂಡು ಎಂಟಾಣೆ ಪ್ರವೇಶ ಫೀಯನ್ನು ಕೊಟ್ಟು ತಮ್ಮ ಹೆಸರನ್ನು ರಜಿಷ್ಟರ ಮಾಡಿಸಿಕೊಳ್ಳಬೇಕಾಗುವುದು. ಇಂದಿನ ವರೆಗೆ ಪ್ರಕಟಿಸಲ್ಪಟ್ಟ ಗ್ರಂಥಗಳು:—

(೧) ಸಾವಿತ್ರೀಸತ್ಯವಾನ—ದ್ವಿತೀಯಮುದ್ರಣ. ಪೌ. ಕಥೆ ೦—೧೨—೦
(೨) ಪದ್ಮಿನಿ—ಮೂರನೆಯ ಮುದ್ರಣ. ಐತಿಹಾಸಿಕ ಕಥೆ ೦—೧೨—೦
(೩) ದಾಕ್ಷಾಯಿಣಿ—ದ್ವಿತೀಯ ಮುದ್ರಣ. ಪೌ. ಕಥೆ ೦— ೮—೦
(೪) ಮಹಾರಾಣಿ ಲಕ್ಷ್ಮೀಬಾಯಿ—ದ್ವಿ. ಮು. ಐ. ಕಥೆ ೦—೧೨—೦
(೫) ಪಾರ್ವತಿ ( ದಾಕ್ಷಾಯಿಣಿಯ ಮುಂದಿನ ಭಾಗ ) ೦— ೮—೦
(೬) ಕವಿತಾ ಕುಸುಮಮಂಜರಿ (ಖಂಡಕಾವ್ಯ) ಪ್ರಥಮಗುಚ್ಛ ೦— ೫—೦
(೭) ಕವಿತಾ ಕುಸುಮಮಂಜರಿ ,, ದ್ವಿತೀಯಗುಚ್ಛ ೦—೫—೦
(೮) ಸತ್ಕಥಾ ಕುಸುಮ ಮಂಜರಿ. ದ್ವಿತೀಯ ಗುಚ್ಛ ೦—೪—೦

( ಶ್ರೀ ಸ್ವಾಮಿ ರಾಮಕೃಷ್ಣ ಪರಮಹಂಸರ ಚಿಕ್ಕ ಕಥೆಗಳು, )

(೯) ಸತ್ಕಥಾ ಕುಸುಮ ಮಂಜರಿ ತೃತೀಯ ಗುಚ್ಛ ೦—೪—೦

ಪತ್ತೆ:— ವ್ಯವಸ್ಥಾಪಕ—ಶ್ರೀಸರಸ್ವತೀ ಮಂದಿರಮ್

ಧಾರವಾಡ.

---

ಇದನ್ನು ಶ್ರೀ. ಆರ್. ಎಸ್. ಹುಕ್ಕೇರಿಕರ ಇವರು ತಮ್ಮ ಕರ್ನಾಟಕ ಮುದ್ರಣಾಲಯದಲ್ಲಿ ಮುದ್ರಿಸಿದರು. ಮತ್ತು ಶ್ರೀ. ಎನ್. ವಿ. ಕುರಡಿಯವರು ಧಾರವಾಡದಲ್ಲಿ ಶ್ರೀ. ಸರಸ್ವತೀ ಮಂದಿರದಲ್ಲಿ ಪ್ರಕಟಿಸಿದರು.